# ನಮ್ಮ ಮಾನಸ

ಆಗಸ್ಟ್ 2008

ಸಂಪುಟ : 2 ಸಂಚಿಕೆ : 4

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*✆ : 26757159*




•

ಚಂದಾ ವಿವರ

| | |
|---|---|
| ಬಿಡಿಪ್ರತಿ | 8-00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಪರಿವಿಡಿ



## ಓದುಗರ ಗಮನಕ್ಕೆ

ಓದುಗರೆಲ್ಲರ ಸಹಕಾರ ಹಾಗೂ ಪ್ರೋತ್ಸಾಹದಿಂದ 'ನಮ್ಮ ಮಾನಸ'ದ ಪ್ರಕಟಣೆ ಸಾಧ್ಯವಾಗಿದೆ. ಪತ್ರಿಕೆಗೆ ಓದುಗರ ಚಂದಾ ಹಣವೇ ಜೀವಾಳ. ಚಂದಾಹಣ ಕಳುಹಿಸಿ ಮತ್ತು ಚಂದಾ ನವೀಕರಿಸಬೇಕಾದವರು ನವೀಕರಿಸಿ ಪತ್ರಿಕೆಯನ್ನು ಆರ್ಥಿಕವಾಗಿ ಸದೃಢಗೊಳಿಸಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**ವಾರ್ಷಿದ ಚಂದಾ – 100/– ರೂ.**

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

– – –

**ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ**
**ಚಂದಾ ನವೀಕರಣಕ್ಕೆ ಸಂಪರ್ಕಿಸಿ**

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು - 570 017*



ಸಂಪಾದಕೀಯ

# ಕೋಮುವಾದಿ ಭಾವನೆ ಬಿತ್ತುತ್ತಿರುವ ಪಕ್ಷ ರಾಜಕಾರಣ

ಮಕ್ಕಳ ರಕ್ತ ಬೀದಿಗಳಲ್ಲಿ ಹರಿಯುತ್ತಿದೆ
ನಿಶ್ಶಬ್ದವಾಗಿ – ಮಕ್ಕಳ ರಕ್ತದ ಹಾಗೆ
ಬನ್ನಿ, ನೋಡಿ, ಬೀದಿಗಳಲ್ಲಿನ ರಕ್ತವನ್ನು
ಬನ್ನಿ, ನೋಡಿ
ಬೀದಿಗಳಲ್ಲಿನ ರಕ್ತವನ್ನು
ಬನ್ನಿ ನೋಡಿ, ಬೀದಿಗಳಲ್ಲಿನ ರಕ್ತವನ್ನು.

**ಪಾ**ಬ್ಲೋ ನೆರೂಡ ತನ್ನ ಕನಸುಗಳನ್ನು ಪದ್ಯದಲ್ಲಿ ಹಂಚಿಕೊಳ್ಳುವ ಬದಲು ಬರಿಯ ರಕ್ತದ ಬಗ್ಗೆಯೇ ಬರೆದ. ಯುದ್ಧಗಳಲ್ಲಿ ಹಾಗೂ ಬಾಂಬ್ ದಾಳಿಯಿಂದಾಗಿ ಹರಿದ ರಕ್ತವದು. ಮಹಾತ್ಮಗಾಂಧಿ ಅಹಿಂಸೆಯ ಬಗ್ಗೆ ಮಾತನಾಡಿದ್ದರೆ, ಐನ್‌ಸ್ಟೀನ್ ಆಟಂಅನ್ನು ಇಬ್ಭಾಗಿಸುವ ವಿಚಾರಧಾರೆಯನ್ನು ಈ ಜಗತ್ತಿಗೆ ನೀಡಿದ್ದ. ಈ ಎರಡೂ ಆಯುಧಗಳನ್ನು ಇಪ್ಪತ್ತನೆಯ ಶತಮಾನ ಬಳಸಿತ್ತು. ಈಗ ಎರಡನೆಯದು ಮಾತ್ರ ವಿನಾಶಕ್ಕೆ ಬಳಕೆಯಾಗುತ್ತಿದೆ. ಹಿರೋಶಿಮಾ ನಾಗಸಾಕಿಯಿಂದ ಪ್ರಾರಂಭವಾದ ಬಾಂಬ್ ಸಂಸ್ಕೃತಿ ಈಗ ಬೆಂಗಳೂರಿಗೆ ಲಗ್ಗೆ ಇಟ್ಟಿದೆ, ಹಿಂದೆಯೇ ಅಹಮದಾಬಾದ್. ಯಾರು ಯಾರನ್ನು ಟಾರ್ಗೆಟ್ ಮಾಡಿಕೊಳ್ಳುತ್ತಾರೋ? ಗಾರ್ಮೆಂಟ್ಸ್‌ನಲ್ಲಿ ದುಡಿಯುವ ಸುಧಾ ಇದ್ದಕ್ಕಿದ್ದಂತೆ ಬಸ್‌ಸ್ಟ್ಯಾಂಡ್‌ನಲ್ಲಿ ಮರಣವನ್ನಪ್ಪಿದ್ದು, ಅಹಮದಾಬಾದ್‌ನ ಗಾಡಿತಳ್ಳುವ ಜನರು ರಸ್ತೆ ಬದಿಯಲ್ಲಿ ಅನಾಥವಾಗಿ ಉರುಳಿದ್ದು ಮನಸ್ಸಾಕ್ಷಿಯಿರುವ ಜನರನ್ನು ಕಲಕುವ ದೃಶ್ಯಗಳಾಗಿವೆ. ಒಂದು ಕ್ಷಣದಲ್ಲಿ ತಮ್ಮ ಪಾಡಿಗೆ ತಾವು ಬದುಕುವ ಜನರ ಬದುಕನ್ನು ಶೂನ್ಯವಾಗಿಸುವ, ಅಲ್ಲೋಲ ಕಲ್ಲೋಲವಾಗಿಸುವ, ಜೊತೆಗೆ ಸಾಮಾನ್ಯರ ಮನಸ್ಸಿನಲ್ಲಿ ಆತಂಕ, ಭಯ ಹುಟ್ಟುಹಾಕುವ ಈ 'ಬಾಂಬ್ ಸಂಸ್ಕೃತಿ' ನಮ್ಮನ್ನೆಲ್ಲಿಗೆ ಒಯ್ಯಬಹುದು ಎಂಬುದನ್ನು ಗಂಭೀರವಾಗಿ ಯೋಚಿಸಬೇಕಾಗಿದೆ. ಜಾಗತಿಕ ಮಟ್ಟದಲ್ಲಿ 'ಜಿಹಾದಿ' ಬೆಳೆಸಲು ನಿಂತಿರುವ ಮೂಲಭೂತವಾದಿಗಳು ಅಮೆರಿಕಾದ ಇಂಪೀರಿಯಲಿಸಂಅನ್ನು ನಾಶ ಮಾಡ ಬಯಸುತ್ತಲೇ ಇತರ ರಾಷ್ಟ್ರಗಳ ಭದ್ರತೆಗೆ ಧಕ್ಕೆ ತರಲು ಎಲ್ಲೆಂದರಲ್ಲಿ ಬಾಂಬ್ ದಾಳಿಯಿಂದ ಮಾರಣ ಹೋಮ ನಡೆಸುತ್ತಿದ್ದಾರೆ. ಇದಕ್ಕಾಗಿಯೇ ಹುಟ್ಟಿರುವ ಸಂಘಟನೆಗಳು ಅಂತಾರಾಷ್ಟ್ರೀಯ ನೆಲೆಯಲ್ಲಿ ಕಮ್ಮಟಗಳನ್ನು ನಡೆಸಿ ತರಬೇತಿ ನೀಡುವುದರಿಂದ ಹಿಡಿದು ಶಸ್ತ್ರಾಸ್ತ್ರ ಸರಬರಾಜು ಮಾಡುತ್ತವೆ; ಧಾರ್ಮಿಕವಾಗಿ ಕೋಮುವಾದಿ ಭಾವನೆ ಬಿತ್ತುತ್ತಿವೆ, ಯುವಕ-ಯುವತಿಯರಲ್ಲಿ ಮತಾಂಧತೆ ಬಿತ್ತಿ ಬಾಂಬ್ ದಾಳಿ ನಡೆಸಲು ಸಿದ್ಧ ಮಾಡುತ್ತಿವೆ.

ಇದಕ್ಕೆ ತಾವೇನೂ ಕಡಿಮೆ ಇಲ್ಲವೆಂಬಂತೆ ಸ್ಥಳೀಯ ಮಟ್ಟದಲ್ಲಿ ಹಿಂದೂತ್ವ ಬೆಳೆಸುವ ಸಂಘಟನೆಗಳೂ ಮೇಲಿನ ಮಾದರಿಗೆ counter effect ಎನ್ನುವಂತೆ ಬೆಳೆಯತೊಡಗಿವೆ. ಮೂಲಭೂತವಾದಿಗಳು ಜಾಗತಿಕ ಮಟ್ಟದಲ್ಲಿ 'ಜಿಹಾದಿ' ಬೆಳೆಸುತ್ತಾರೋ, ಸ್ಥಳೀಯ ಮಟ್ಟದಲ್ಲಿ ಹಿಂದೂತ್ವ ಬೆಳೆಸುತ್ತಾರೋ – ಆದರೆ ಈ ರಾಜಕೀಯದ ಪಗಡೆಯಾಟದಲ್ಲಿ ಕಾಯಿಗಳು ಮಾತ್ರ ಸಾಮಾನ್ಯ ಜನರೇ.

ಅಧಿಕಾರ ರಾಜಕಾರಣದ ಮೇಲೇ ಕಣ್ಣಿರುವ ನಮ್ಮ ರಾಜಕೀಯ ಪಕ್ಷಗಳು ತಮ್ಮ ಎಡಬಿಡಂಗಿತನದ ನಿಲುವುಗಳಿಂದಾಗಿ ಕೋಮುವಾದಿ ಭಾವನೆಗಳಿಗೆ ನೀರೆರೆಯುವ ಕೆಲಸಗಳನ್ನೇ ಮಾಡುತ್ತವೆ. ವೋಟ್ ಬ್ಯಾಂಕ್ ಆಗಿ ಸಮುದಾಯಗಳನ್ನು ಬಳಸಿಕೊಳ್ಳುವ ರಾಜಕೀಯ ಪಕ್ಷಗಳು ಅಧಿಕಾರಕ್ಕಾಗಿ ಯಾವುದೇ ನೈತಿಕತೆ ಇಲ್ಲದ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿವೆ. ಒಬ್ಬರಿಗೊಬ್ಬರು ಕೆಸರನ್ನು ಎರಚಾಡುವ ಸಂದರ್ಭಕ್ಕೆ ಧರ್ಮವನ್ನು ಪಣವಾಗಿಟ್ಟುಕೊಂಡು ಸಾಮಾನ್ಯರ ಮನಸ್ಸಿನಲ್ಲಿ ಕೋಮುವಾದಿ ಭಾವನೆ, ಮತಾಂಧತೆಯನ್ನು ಸಮರ್ಥವಾಗಿ ಹುಟ್ಟು ಹಾಕುತ್ತವೆ. ಇದಕ್ಕಾಗಿ ನಮ್ಮ ರಾಜಕೀಯ ಪಕ್ಷಗಳು ಹಲವಾರು ಸಮಸ್ಯೆಗಳನ್ನು ತಾವೇ ಸೃಷ್ಟಿಸಿ ಕೋಮುವಾದಿ ಗಲಾಟೆಗಳಿಗೆ ಮಣೆ ಹಾಕುತ್ತವೆ.

ಬೆಳೆಯುತ್ತಿರುವ ಜಾಗತೀಕರಣದ ವೇಗಕ್ಕೆ ಸಾಂಸ್ಕೃತಿಕ ಅಡ್ಡಗೋಡೆಗಳಂತೆ ಧರ್ಮವನ್ನು ಬಳಸುತ್ತಿರುವ ಸಮುದಾಯಗಳು, ರಾಜಕೀಯ ಪಕ್ಷಗಳು ನಿರುದ್ಯೋಗಿ ಯುವಕ-ಯುವತಿಯರನ್ನು, ಅದರಲ್ಲೂ ವಿದ್ಯಾವಂತರನ್ನು ಬಳಸಿಕೊಳ್ಳುತ್ತಿರುವುದು

ವಿಪರ್ಯಾಸವೇ ಸರಿ. ಶಿಕ್ಷಣದಲ್ಲಿ ಸ್ಥಳೀಯವಾಗಿ ಕೇಸರೀಕರಣದಲ್ಲಿ ಹಾಗೂ ಜಾಗತಿಕ ಮಟ್ಟದಲ್ಲಿ ಜಿಹಾದಿ ಸಂಸ್ಕೃತಿ ಬೆಳೆಸುವತ್ತ ಹೆಜ್ಜೆ ಹಾಕುವ ಸಮುದಾಯಗಳು ಅಪಾಯಕಾರಿ ಬೌದ್ಧಿಕತೆಯನ್ನು ಮುಗ್ಧ ಯುವಕ-ಯುವತಿಯರ ಮನಸ್ಸಿನಲ್ಲಿ ಹುಟ್ಟು ಹಾಕುವುದನ್ನು ತಡೆಯುವಂತಹ ಮಾನವೀಯ ಮೌಲ್ಯಗಳ ಶಿಕ್ಷಣ ನಮಗಿಂದು ಅಗತ್ಯವಾಗಿದೆ.

'ಬಾಂಬ್ ಸಂಸ್ಕೃತಿ'ಯನ್ನು ಮಟ್ಟ ಹಾಕಬೇಕೆಂದರೆ ಮನುಷ್ಯನ ಮನಸ್ಸನ್ನು ಗಾಂಧೀಜಿ ನಂಬಿದ ಹಾಗೆ ನಂಬಿ ಸುಧಾರಣೆ ಮಾಡಬೇಕಾಗಿದೆ. ಧರ್ಮ ಮನುಷ್ಯನ ಮನಸ್ಸಿನ ವಿಚಾರವಾಗಿ ಉಳಿಯಬೇಕಾಗಿದೆಯೇ ಹೊರತು ರಾಜಕೀಯ ಕನ್ನಡಿಯಲ್ಲ ಎಂಬುದನ್ನು ಬೆಳೆಯುವ ಮನಸ್ಸುಗಳಲ್ಲಿ ನಾವು ಸ್ಪಷ್ಟಪಡಿಸಬೇಕಾಗಿದೆ. ಯುದ್ಧ ಒಪ್ಪಂದಗಳನ್ನ, ಯುದ್ಧಕ್ಕೆ ಸರ್ಕಾರ ಮಾಡುತ್ತಿರುವ ಖರ್ಚು-ವೆಚ್ಚಗಳನ್ನು ಕೂಡಾ ನಾವು ಗಟ್ಟಿಯಾಗಿ ವಿರೋಧಿಸಬೇಕಾಗುತ್ತದೆ. ರಾಜ್ಯದಲ್ಲಿ ಹಿಂಸೆ ಆಂತರಿಕವಾಗಿ ಹಾಗೂ ಬಾಹ್ಯವಾಗಿ ಬೆಳೆಯುವ ಎರಡೂ ಬಗೆಗಳನ್ನು ನಿರ್ಬಂಧಿಸುವ ಒಂದು ನಾಗರಿಕ ಜನಾಂಗ ಮಾತ್ರ 'ಹಿಂಸೆ'ಯನ್ನು ತಡೆಗಟ್ಟುವಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಬಹುದಾಗಿದೆ.

ಭಯೋತ್ಪಾದನೆಯ ಭೂತ ಎಷ್ಟು ಬಲವಾಗಿ ಬೇರೂರಿದೆಯೆಂದರೆ, ಯಾವುದೇ ನ್ಯಾಯಯುತ ಪ್ರಜಾಪ್ರಭುತ್ವ ನೆಲೆಯ ಪ್ರತಿಭಟನೆಯನ್ನೂ ಹತ್ತಿಕ್ಕುವ ಪ್ರಯತ್ನವನ್ನು ನಾವು ನೋಡಬಹುದು. ಸಾಮಾಜಿಕ ಕಾರ್ಯಕರ್ತರನ್ನು, ಭ್ರಷ್ಟಾಚಾರವನ್ನು ವಿರೋಧಿಸುವವರನ್ನು ಹತ್ತಿಕ್ಕುವ ಒಂದೇ ದಾರಿ ಅವರನ್ನು ಹತ್ಯೆ ಮಾಡುವುದು. ಇಂತಹ ಕೃತ್ಯಗಳಿಗೆ ಭ್ರಷ್ಟ ವ್ಯವಸ್ಥೆ ಸಂಪೂರ್ಣ ಸಹಕಾರವನ್ನು ನೀಡುತ್ತದೆ. ಇತ್ತೀಚೆಗೆ ಎ. ಡಿ. ಬಾಬುರವರ ಹತ್ಯೆ ಇದಕ್ಕೆ ಸ್ಪಷ್ಟ ನಿದರ್ಶನ. ಇದು ಮಾನವ ಹಕ್ಕುಗಳ ಸ್ಪಷ್ಟ ಉಲ್ಲಂಘನೆಯಾಗಿದೆ. ಈ ಸಂದರ್ಭದಲ್ಲಿ ಡೇವಿಡ್ ಕ್ಲೈಗರ್‌ನ ಒಂದು ಪದ್ಯ ನೆನಪಾಗುತ್ತಿದೆ:

## ಈ ದಿನ ಯುದ್ಧಕ್ಕೆ ಶುಭ ದಿನವಲ್ಲ

ಈ ದಿನ ಯುದ್ಧಕ್ಕೆ ಶುಭದಿನವಲ್ಲ
ಅಲ್ಲ, ಸೂರ್ಯ ಹೊಳೆಯುತ್ತಿರುವಾಗ
ತಂಗಾಳಿಯಲ್ಲಿ ಎಲೆಗಳು ಅಲುಗಾಡುತ್ತಿರುವಾಗ

ಈ ದಿನ ಬಾಂಬ್ ದಾಳಿಗೆ ಶುಭ ದಿನವಲ್ಲ
ಅಲ್ಲ, ದಿಗಂತದಲಿ ಮೋಡಗಳು ನೇತಾಡುತ್ತಿರುವಾಗ
ಸಮುದ್ರಕ್ಕಿಂತ ಮೇಲೇರುತ್ತಿರುವಾಗ

ಈ ದಿನ ಯುವಕರು ಸಾಯುವುದಕ್ಕೆ ಶುಭ ದಿನವಲ್ಲ
ಅಲ್ಲ, ಅವರಲ್ಲಿ ಬಹಳ ಕನಸುಗಳಿರುವಾಗ
ಮತ್ತೆ ಮಾಡಲಿಕ್ಕೆ ಇನ್ನೂ ಎಷ್ಟೋ ಇರುವಾಗ.

ಈ ದಿನ ಶುಭ ದಿನವಲ್ಲ ಕ್ಷಿಪಣಿ ಉಡಾಯಿಸುವುದಕ್ಕೆ
ಅಲ್ಲ, ಮಂಜು ಉರುಳುತ್ತಿರುವಾಗ
ಮಳೆ ಧೋ ಎಂದು ಸುರಿಯುತ್ತಿರುವಾಗ

ಈ ದಿನ ಆಕ್ರಮಣಕ್ಕೆ ಶುಭ ದಿನವಲ್ಲ
ಅಲ್ಲ, ಕುಟುಂಬಗಳು ಒಂದೆಡೆ ಕಲೆತಿರುವಾಗ
ಒಬ್ಬರಿಗೊಬ್ಬರು ಆತುಕೊಂಡಿರುವಾಗ

ಈ ದಿನ ಉದ್ದೇಶಪೂರ್ವಕ ನಾಶದ ಹಿಂದಿನ
ನಿರುದ್ದೇಶ ನಾಶಕ್ಕೆ (ಕೊಲ್ಯಾಟರಲ್ ಡ್ಯಾಮೇಜ್)
ಅಲ್ಲ, ಮಕ್ಕಳು ಅಶಾಂತರಾಗಿರುವಾಗ
ಕಪ್ಪೆ ಮತ್ತು ಕೊರಕಲುಗಳ ಬಗ್ಗೆ ಹಗಲುಗನಸು ಕಾಣುತ್ತಿರುವಾಗ

ಈ ದಿನ ಯುದ್ಧಕ್ಕೆ ಶುಭದಿನವಲ್ಲ
ಅಲ್ಲ, ಹಕ್ಕಿಗಳು ಮೇಲೆ ಮೇಲೆ ಹಾರುತ್ತಿರುವಾಗ
ಆಕಾಶಕ್ಕೆ ಶೋಭೆಯನ್ನು ಮೂಡಿಸಿರುವಾಗ

ಅವರು ನಮಗೆ ಇತರರ ಬಗ್ಗೆ ಏನು ಹೇಳುತ್ತಾರೋ ಅದು ಬೇಡ
ಅವರ ದೇಶಪ್ರೇಮದ ಕೂಗು ಎಷ್ಟು ಸಾಹಸದ್ದೋ ಅದೂ ಬೇಡ
ಈ ದಿನ ಯುದ್ಧಕ್ಕೆ ಶುಭ ದಿನವಲ್ಲ.

*(ಅನು: ಚಂಪಾವತಿ ಎಚ್. ಎಸ್.)*

* * *

ಖ್ಯಾತ ಲೇಖಕಿ ರೇಖಾ ಕಾಖಂಡಕಿ ಅವರು ತಮ್ಮ 'ಬಯಲು ಭೂಮಿ' ಕಾದಂಬರಿಗೆ 2007ರ ವರ್ಧಮಾನ ಸಾಹಿತ್ಯ ಪ್ರಶಸ್ತಿ ಪಡೆದಿದ್ದಾರೆ. ಡಾ॥ ಪ್ರೀತಿ ಶುಭಚಂದ್ರ ಅವರು 'ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳವಳಿಗಳು' ಕೃತಿಗೆ ವರ್ಧಮಾನ ಉದಯೋನ್ಮುಖ ಸಾಹಿತ್ಯ ಪ್ರಶಸ್ತಿ ಪಡೆದಿದ್ದಾರೆ. ಇವರಿಬ್ಬರಿಗೂ ಮಾನಸದ ಅಭಿನಂದನೆಗಳು.

# ಬ್ರಿಟನ್‌ನಲ್ಲಿ ದಕ್ಷಿಣ ಏಷಿಯಾದ ಮಹಿಳೆಯರ ಸ್ಥಿತಿಗತಿ

ಅಮೃತ ವಿಲ್‌ಸನ್‌ರವರ 'ಸೌತ್ ಏಷಿಯನ್ ವಿಮೆನ್' ಪುಸ್ತಕದಲ್ಲಿ ಬ್ರಿಟನ್‌ನಲ್ಲಿ ವಾಸಿಸುವ ದಕ್ಷಿಣ ಏಷಿಯಾದ ಮಹಿಳೆಯರ ಸ್ಥಾನ-ಮಾನ, ಸ್ಥಿತಿಗತಿಯನ್ನು ಕುರಿತು ಮಹಿಳಾ ದೃಷ್ಟಿಕೋನದಿಂದ ಚರ್ಚಿಸಲಾಗಿದೆ. ಬ್ರಿಟನ್ ಸಮಾಜದಲ್ಲಿರುವ ಪಿತೃಪ್ರಧಾನತೆ, ವರ್ಗ ಹಾಗೂ ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮಹಿಳೆಯರ ಜೀವನದ ವಿವಿಧ ಮುಖಗಳನ್ನು ವಿಶ್ಲೇಷಿಸಲಾಗಿದೆ.

ಕಡಿಮೆ ವೇತನ ಪಡೆಯುವ ಮಹಿಳೆಯರ ದುಡಿಮೆಯಿಂದ ಜಾಗತಿಕ ಮಾರುಕಟ್ಟೆಯಲ್ಲಿ ಮಹಿಳೆಯರು ಹೇಗೆ ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು ವಿಶ್ಲೇಷಿಸುತ್ತಾ, ಬ್ರಿಟನ್ನಿನ ಆರ್ಥಿಕತೆಗೆ ಕಡಿಮೆ ವೇತನ ಪಡೆಯುವ ಮಹಿಳೆಯರ ದುಡಿಮೆ ಅತಿದೊಡ್ಡ ಕೊಡುಗೆಯಾಗಿದೆ ಎಂದಿದ್ದಾರೆ. ದಕ್ಷಿಣ ಏಷಿಯಾದ ಮಹಿಳೆಯರು ಎರಡು ರೀತಿಯ ಪಿತೃಪ್ರಧಾನ ಮೌಲ್ಯಗಳಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಭಾರತೀಯ ಪಿತೃಪ್ರಧಾನತೆ ಒಂದು ಕಡೆಗಾದರೆ, ಬ್ರಿಟನ್ ಪಿತೃಪ್ರಧಾನತೆಗೂ ಅಧೀನರಾಗಿ ಈ ಮಹಿಳೆಯರು ಬದುಕಬೇಕಾಗುತ್ತದೆ. ರಾಜ್ಯ, ಮಾಧ್ಯಮ ಹಾಗೂ ಮಾರ್ಕೆಟ್ ಪಾಲಿಸಿಗಳ ಒತ್ತಡಗಳು ನೇರವಾಗಿ ಮಹಿಳೆಯರ ಬದುಕನ್ನು ದುರ್ಬಲಗೊಳಿಸುತ್ತವೆ. ಬ್ರಿಟನ್‌ನಲ್ಲಿ ದುಡಿಯುವ ಮಹಿಳೆಯರು ಅಲ್ಲಿನ ಆರ್ಥಿಕ ಮಾರು ಕಟ್ಟೆಯ ಬೇಡಿಕೆಯಂತೆ ಲೈಂಗಿಕವಾಗಿ ಆಕರ್ಷಕ ವಾಗಿರಬೇಕೆಂಬುದಕ್ಕೆ ಹೊಂದಿಕೊಂಡು ಹೋಗ ಬೇಕಾಗುತ್ತದೆ.



ಒಂದು ಜನಾಂಗದ ಪ್ರಾದೇಶಿಕತೆಯ ಪುರುಷತ್ವದ ಬಲಾಬಲ ಗಳನ್ನು ಇನ್ನೊಂದು ಜನಾಂಗದ ಜೊತೆಗೆ ಹೋಲಿಸಲಾಗುತ್ತದೆ. ಇಲ್ಲಿ ಜಾತಿ, ಜನಾಂಗ, ಧರ್ಮ ಎಲ್ಲವೂ ಸೇರುತ್ತವೆ. ತಮ್ಮ ಸ್ತ್ರೀಯರನ್ನು ಇತರ ಜನಾಂಗದಿಂದ ರಕ್ಷಣೆ ಮಾಡುವುದು ತಮ್ಮ ಕರ್ತವ್ಯವೆಂದು ಪುರುಷರು ಭಾವಿಸುತ್ತಾರೆ. ವಿಶೇಷವಾಗಿ ಕೆಳಜಾತಿ ಹಾಗೂ ಮುಸ್ಲಿಮ ರಿಂದ. ಹಾಗಾಗಿ ಮಹಿಳೆಯರನ್ನು ಪುರುಷರು ಸದಾ ತಮ್ಮ ನಿಯಂತ್ರಣ ದಲ್ಲಿ ಇಟ್ಟುಕೊಂಡಿರುತ್ತಾರೆ. ಅವರು ಮುಖ್ಯವಾಗಿ ಕಪ್ಪು ಜನಾಂಗ, ಬಿಳಿಯರು ಹಾಗೂ ಮುಸ್ಲಿಮರಿಂದ ದೂರವಿರುವಂತೆ ಎಚ್ಚರವಹಿಸು ತ್ತಾರೆ. ಗುಜರಾತಿ ಪಟೇಲ ಹೆಣ್ಣುಮಕ್ಕಳ ನೈತಿಕತೆಯನ್ನು ಕಾಪಾಡುವ ಸ್ವಘೋಷಿತ ಪೋಷಕನ ಪಾತ್ರವನ್ನು ಬಾಬುಲಾಲ್ ಭಜರಂಗಿ ಎಂಬುವವರು ವಹಿಸುತ್ತಾರೆ. ಇವರು ಪಟೇಲ ಮತ್ತು ಹೆಣ್ಣುಮಕ್ಕಳ ಮದುವೆಯನ್ನು ವಿಶೇಷವಾಗಿ ಮುಸ್ಲಿಂ, ಕ್ರಿಶ್ಚಿಯನ್ ಪಟೇಲರಲ್ಲದವರ ಜೊತೆಗಿನ ವಿವಾಹವನ್ನು ಒತ್ತಾಯಪೂರ್ವಕವಾಗಿ ಮುರಿಯುವ ಪ್ರಯತ್ನವನ್ನು ಮಾಡುತ್ತಾರೆ.

ಬಂಡವಾಳಶಾಹಿ ಮಾರುಕಟ್ಟೆಯ ಲಾಭದ ಹಿತದೃಷ್ಟಿಯಿಂದ ಮಹಿಳೆಯರ ಸೌಂದರ್ಯವನ್ನು ನಿರೀಕ್ಷಿಸಲಾಗುತ್ತದೆ. ಕೆಲಸದ ದೃಷ್ಟಿಯಿಂದ ಹಾಗೂ ವಿವಾಹದ ದೃಷ್ಟಿಯಿಂದ ಹುಡುಗಿಯರು ತೆಳ್ಳಗೆ ಬಳುಕು ವಂತಿರಬೇಕು. ಹಾಗಾಗಿ ಹೆಣ್ಣುಮಕ್ಕಳು ತಿನ್ನುವ ಆಹಾರದ ಪ್ರಮಾಣ ಸಹಜವಾಗಿ ಕಡಿಮೆ ಇರುತ್ತದೆ. ಇದು ಅವರ ಆರೋಗ್ಯದ ಮೇಲೆ ತೀವ್ರ ದುಷ್ಪರಿಣಾಮವನ್ನು ಬೀರುತ್ತದೆ.

ಬ್ರಿಟನ್‌ನಲ್ಲಿ ಇತ್ತೀಚೆಗೆ ಹೊಸ ಅಲೆಯೊಂದು ಮುಸ್ಲಿಂ ಸಮಾಜದ ಮಹಿಳೆಯರಲ್ಲಿ ಚಾಲ್ತಿಯಲ್ಲಿದೆ. ಹೊಸ ಅಸ್ತಿತ್ವದ ಹುಡುಕಾಟದಲ್ಲಿ ಮಹಿಳೆಯರು ಬುರ್ಖಾದ ಬದಲಾಗಿ **'ಹಿಜಾಬ್'** ಧರಿಸುವುದರ ಮೂಲಕ ತಮ್ಮತನವನ್ನು ಸಾಬೀತುಪಡಿಸುತ್ತಿದ್ದಾರೆ. ಪುರುಷ ಹಿಡಿತದಿಂದ ದೈನಂದಿನ ಜೀವನವನ್ನು ತಪ್ಪಿಸಿಕೊಳ್ಳುವ ದೃಷ್ಟಿಯಿಂದ ಹಾಗೂ ಕೇವಲ 'ಲೈಂಗಿಕ ಅಸ್ತಿತ್ವ'ದ ಬದಲಾವಣೆಗಾಗಿ ಹೆಣ್ಣುಮಕ್ಕಳು ಈ ಪ್ರಯತ್ನವನ್ನು ಮಾಡುತ್ತಿದ್ದಾರೆ. ಹಿಜಾಬ್ ಧರಿಸುವುದು ಸಹ ಇನ್ನೊಂದು ಅರ್ಥದಲ್ಲಿ ಅವರ ಅದೃಶ್ಯತೆಯನ್ನು ಎತ್ತಿಹಿಡಿಯುತ್ತಿದೆಯಾದರೂ ಸ್ವಲ್ಪಮಟ್ಟಿಗೆ ಅವರ ಮಾನಸಿಕ ಧೈರ್ಯಕ್ಕೆ ಸಂಕೇತವಾಗಿದೆ.

ಹಿಜಾಬ್ ಧರಿಸಿದ 17 ವರ್ಷದ ಹುಡುಗಿಯೊಬ್ಬಳನ್ನು ಬಿಳಿಯನೊಬ್ಬ 'ನಿಂಜಾ' ಎಂದು ಸದಾ ಚುಡಾಯಿಸುತ್ತಿದ್ದ. ಹಿಜಾಬ್ ಧರಿಸುವ ಹುಡುಗಿಯರನ್ನು ಚುಡಾಯಿಸುವ ರೀತಿ ಅದಾಗಿತ್ತು. ಅವಳು ಹೆದರುವ, ಮೃದುವಾದ, ಮೆತ್ತನೆಯ ಹುಡುಗಿಯೆಂದು ಆತ ಭಾವಿಸಿದ್ದ. ಆದರೆ ಆಕೆ ಒಮ್ಮೆ ಆತನನ್ನು ಚೆನ್ನಾಗಿ ಥಳಿಸಿದ್ದಳು. ಹಿಜಾಬ್ ಧರಿಸುವ ಮಹಿಳೆಯರು ರಾಜಕೀಯವಾಗಿ ನವ ಮುಸ್ಲಿಂ ಸಮುದಾಯವನ್ನು, ಆಧುನಿಕತೆಯನ್ನು ಪ್ರತಿನಿಧಿಸುತ್ತಾರೆ. ಇರಾನಿನಿಂದ ಬಂದ ಮಹಿಳೆ ಯೊಬ್ಬಳು ಪಾಕಿಸ್ತಾನದ ಹೋಟೇಲ್ ಒಂದರಲ್ಲಿ ಸಹಾಯಕಿಯಾಗಿ ಕೆಲಸಮಾಡುತ್ತಿದ್ದಳು. ಆಕೆ ಸಾಮಾನುಗಳನ್ನು ತೆಗೆಯುವುದು, ಇಡುವುದು, ಓಡಾಡುತ್ತ ಕೆಲಸಮಾಡುವುದನ್ನು ನೋಡುತ್ತಿದ್ದರೆ ಆಕೆಯ ಮುಕ್ತವಾದ ದೈಹಿಕ ಚಲನೆಯ ಬಗ್ಗೆ ಆಶ್ಚರ್ಯವಾಗುವಂತಿತ್ತು ಮತ್ತು ಫ್ಯಾಮಿಲಿ ಕೊಠಡಿಯಲ್ಲಿ ಸೇರಿಕೊಂಡು ಹೊಟ್ಟೆತುಂಬಾ ತಿನ್ನುವ, ಹಿಜಾಬ್ ಧರಿಸದ ಮಹಿಳೆಯರಿಗಿಂತ ಈಕೆ ಭಿನ್ನವಾಗಿದ್ದಳು ಎಂಬು ದನ್ನು ಲೇಖಕಿ ದಾಖಲಿಸುತ್ತಾರೆ.

ಬ್ರಿಟನ್‌ನಲ್ಲಿ ಏಷಿಯನ್ ಮಹಿಳೆಯರು ಎದುರಿಸುವ ಬಹುದೊಡ್ಡ ಸಮಸ್ಯೆಯೆಂದರೆ 1970ರಲ್ಲಿ ಸರ್ಕಾರ ನಡೆಸಲು ತೀರ್ಮಾನಿಸಿದ ಕನ್ಯತ್ವ

ಪರೀಕ್ಷೆ. ಭಾರತದ ಮದುವೆಗಳೆಲ್ಲಾ ಸುಳ್ಳು ಮದುವೆಗಳೆಂದೂ, ಈ ಮದುವೆಗಳು ಬ್ರಿಟನ್ನೆ ಬಂದು ನೆಲೆಸಲು ಮಾಡಿಕೊಳ್ಳುತ್ತಿರುವ ಬೋಗಸ್ ವಿವಾಹಗಳೆಂಬುದೂ ಮಾರ್ಗರೇಟ್ ಥ್ಯಾಚರ್ ಅವರ ಗಾಢವಾದ ನಂಬಿಕೆಯಾಗಿತ್ತು. ಇದು ಥ್ಯಾಚರ್‌ರ ಜನಾಂಗದ್ವೇಷದಿಂದ ಕೂಡಿದ ಧೋರಣೆಯಾಗಿತ್ತು. ಬ್ರಿಟನ್ ಬಹುಸಂಸ್ಕೃತಿಯಿಂದ ತುಂಬಿ ಹೋಗಿದೆಯೆಂದು ಆಕೆ ಭಾವಿಸಿದ್ದರು. 1976ರಲ್ಲಿ 18 ವರ್ಷದ ಗರ್ಭಿಣಿ ಮಹಿಳೆಯೊಬ್ಬಳನ್ನು ಬಂಧಿಸಿ ರಾತ್ರಿಯೆಲ್ಲ ಸೆಲ್‌ನಲ್ಲಿ ಇಟ್ಟು ಅಮಾನುಷವಾದ ಹಿಂಸೆಯನ್ನು ನೀಡಲಾಗಿತ್ತು. ಬೆಳಿಗ್ಗೆ ಆಕೆಯ ಆರೋಗ್ಯ ಹದಗೆಟ್ಟಿದ್ದಲ್ಲದೆ, ಹೆರಿಗೆ ನೋವು ಪ್ರಾರಂಭವಾಗಿ ಮಗು ಮರಣಹೊಂದಿತ್ತು. ಬೇರೆ ದೇಶಗಳಿಂದ ಬರುವ ಜನರಿಗೆ ಸರ್ಕಾರ ತನ್ನ ಅಧಿಕಾರವನ್ನು ಬಳಸಿಕೊಂಡು ದಕ್ಷಿಣ ಏಷಿಯಾದ ಜನರಿಗೆ ಅಮಾನುಷ ಹಿಂಸೆಯನ್ನು ನೀಡುವುದರ ಮೂಲಕ ಮಾನವಹಕ್ಕುಗಳ ಉಲ್ಲಂಘನೆಯನ್ನು ಮಾಡಿತ್ತು.

ಕನ್ಯತ್ವದ ಪರೀಕ್ಷೆ ಇಂದು ನಡೆಯುತ್ತಿಲ್ಲವಾದರೂ, 'ಪ್ರೊಬೇಷನರಿ ಅವಧಿಯ ಈ ನಿಯಮ ಸರ್ಕಾರ ಹಾಗೂ ಪಿತೃಪ್ರಧಾನ ವ್ಯವಸ್ಥೆ ಮಹಿಳೆಯರನ್ನು ಹೇಗೆ ತುಳಿಯುತ್ತಿದೆ ಎನ್ನುವುದಕ್ಕೆ ಉತ್ತಮ ನಿದರ್ಶನ. ಬ್ರಿಟನ್‌ನಲ್ಲಿ ಕೆಲಸ ಮಾಡುತ್ತಿರುವ ಏಷಿಯನ್ ಮಹಿಳಾ ಸಂಘಟನೆಗಳಿಗೆ ಇದೊಂದು ದೊಡ್ಡ ಸಮಸ್ಯೆಯಾಗಿದೆ. ಎರಡು ವರ್ಷ ಪ್ರೊಬೇಷನರಿ ಅವಧಿಯಾಗಿರುವುದರಿಂದ ಗಂಡನ ಮನೆಯಲ್ಲಿ ಆಕೆ ಹಿಂಸೆಗೆ ಒಳಗಾದರೆ ಅದನ್ನು ಬೆಳಕಿಗೆ ತರುವಂತಿಲ್ಲ. ಬೆಳಕಿಗೆ ತಂದರೆ ಆಕೆಯನ್ನು ವಾಪಸ್ ಕಳಿಸಿಬಿಡಬಹುದೆಂಬ ಭಯ ಆಕೆಯನ್ನು ಕಾಡುತ್ತದೆ. ಇಂತಹ ಇಕ್ಕಟ್ಟಿನ ಸಂದರ್ಭದಲ್ಲಿ ಆಕೆ ಮನೆ ಹಾಗೂ ಸಾರ್ವಜನಿಕ ನೆರವು ಎರಡರಿಂದಲೂ ವಂಚಿತಳಾಗುತ್ತಾಳೆ. ವಲಸೆಗಾರಳಾದ ಆಕೆ ಸರ್ಕಾರದ ಜನಾಂಗ ದ್ವೇಷದಿಂದ ಕೂಡಿದ ನಿಯಮ ಹಾಗೂ ಪುರುಷ ಪ್ರಧಾನ ಮೌಲ್ಯಗಳ ನಡುವೆ ಸಿಕ್ಕು ನರಳುವಂತಾಗಿದೆ.

ಬ್ರಿಟನ್ ಸರ್ಕಾರ ತನ್ನ ಅಧಿಕಾರವನ್ನು ಚಲಾಯಿಸಲು ಒತ್ತಾಯದ ಮದುವೆಗಳನ್ನು ಸಹ ಬಳಸಿಕೊಳ್ಳುತ್ತಿದೆ. ಒತ್ತಾಯದ ಮದುವೆಗಳಾದರೆ ಬಿಳಿಯ ಪುರುಷರು, ಬೂದುಬಣ್ಣದ ಪುರುಷರಿಂದ ಅವರ ಮಹಿಳೆಯರನ್ನು ರಕ್ಷಿಸುತ್ತಿದ್ದೇವೆಂಬ ವಸಾಹತುಶಾಹಿ ಮನೋಭಾವನೆ ಅವರಲ್ಲಿ ಬಲವಾಗಿದೆ. ಬ್ರಿಟನ್‌ನಲ್ಲಿ ನೆಲೆಸಿರುವ ವಲಸೆಗಾರರಲ್ಲಿ ಅವರ ದೇಶ, ಭಾಷೆಗಿಂತ ಮುಖ್ಯವಾಗುವುದು ಅವರ ಧರ್ಮ. ಅವರು ಧರ್ಮದ ಆಧಾರದ ಮೇಲೆ ವಿಭಜಿತರಾಗಿದ್ದಾರೆ. ಹಾಗಾಗಿ ಜನಾಂಗದ ಗೌರವವನ್ನು ಕಾಪಾಡುವ ಉದ್ದೇಶದಿಂದ ಹೆಣ್ಣುಮಕ್ಕಳನ್ನು ಹಿಂಸಿಸಿ ಕೊಲೆ ಮಾಡಲಾಗುತ್ತಿದೆ. ಇಂತಹ ಘಟನೆಗಳನ್ನು ಬಳಸಿಕೊಂಡು, ಸರ್ಕಾರ ಸಂಬಂಧಪಟ್ಟ ಜನಾಂಗವನ್ನೇ ಅಪರಾಧಿಯನ್ನಾಗಿ ಮಾಡುತ್ತದೆ. 'ಎರಡು ವರ್ಷ'ದ ನಿಯಮವನ್ನು ಉಪಯೋಗಿಸಿಕೊಂಡು ಎಂತಹ ಅಪಾಯಕಾರಿ ಸನ್ನಿವೇಶದಲ್ಲಿ ಮಹಿಳೆಯರಿದ್ದರೂ ಅವರನ್ನು ಅವರ ದೇಶಕ್ಕೆ ವಾಪಸ್ ಕಳಿಸಿಕೊಡಲಾಗುತ್ತದೆ.

ಏಷಿಯನ್ ಮಹಿಳಾ ಸಂಘಟನೆಗಳು ಸರ್ಕಾರದ ಮೇಲೆ ಹಲವಾರು ರೀತಿಯ ಒತ್ತಡವನ್ನು ಹಾಕುತ್ತಲೇ ಬಂದಿವೆ. ಸರ್ಕಾರದ ವಿರೋಧಾಭಾಸದ ನಿಲುವುಗಳನ್ನು ಖಂಡಿಸುತ್ತಲೇ ಬರಲಾಗಿದೆ. ಹಾಗಾಗಿ ಏಷಿಯನ್ ಸಂಸ್ಕೃತಿಯ ಪುರುಷ ಪ್ರಧಾನತೆಯನ್ನು ಬಳಸಿಕೊಳ್ಳುವ ಬದಲು ಅದನ್ನು ದುರ್ಬಲಗೊಳಿಸುವ ಪ್ರಯತ್ನ ನಡೆಯುತ್ತಿದೆ.

ಅಮೃತ್ ಅವರ ಪುಸ್ತಕ ಬ್ರಿಟನ್‌ನಲ್ಲಿ ಏಷಿಯನ್ ಮಹಿಳೆಯರ ಸ್ಥಿತಿಗತಿಯನ್ನು ದಾಖಲಿಸುವುದರ ಜೊತೆಗೆ ಮಹಿಳಾ ಹೋರಾಟವನ್ನೂ ದಾಖಲಿಸುತ್ತದೆ. ಬ್ರಿಟನ್‌ನಲ್ಲಿ ಸ್ತ್ರೀವಾದದ ಹಾಗೂ ಮಹಿಳಾ ಚಳವಳಿ ಹೋರಾಟದ ಅಗತ್ಯವನ್ನು ಪುಸ್ತಕ ಎತ್ತಿಹೇಳುತ್ತದೆ.

ಮೂಲ: **ಉಮಾ ಚಕ್ರವರ್ತಿ**, ಇ.ಪಿ.ಡಬ್ಲ್ಯೂ

❑

# ದುರಾನಿ

**ಡಾ|| ಬಿ.ಎಸ್. ಸುಮಿತ್ರಾಬಾಯಿ**

ಅಮ್ಮಾ ಸಲಾಂ ತಾಯೀ ಇದೀರಾ
ನಿಮ್ಮ ದುರಾನಿ ಬಂದಿದೇನಮ್ಮಾ ಅಂತ
ಕೂಗು ಕೇಳಿ ಅಮ್ಮ ಲಗುಬಗೆಯಿಂದ
ಅಕ್ಕಿ, ಬೆಲ್ಲ, ಬೇರೇನೋ ತಿಂಡಿ ಎಲ್ಲ
ಪೊಟ್ಟಣ ಕಟ್ಟಿ ತಂದು ಹಾಕುತ್ತಾರೆ
ಅವಳ ಜೋಳಿಗೆಗೆ.

ದುರಾನಿ ಅಂದರೆ ತುಂಬ ಎತ್ತರ ಅಗಲದ
ಭಾರಿ ಹೆಂಗಸು. ಅವಳ ಮೈಮೇಲೆ
ಯಾವತ್ತೂ ಮಾಸಲು ಸೀರೆ, ಮೇಲೆ
ಒಂದು ತೋಳಿರದ ದೊಡ್ಡ ಜುಬ್ಬಾ
ಭುಜದಲ್ಲಿ ಸದಾ ಇಳಿಬಿದ್ದ ಜೋಳಿಗೆ
ಕಾಲಲ್ಲಿ ಹರಕಲು ಪಂಪ್ ಷೂ
ಕೆದರಿದ ಬಿಳಿ ಕೂದಲ ರಾಣಿ ದುರಾನಿ.

ಪ್ರತಿವಾರದಲ್ಲಿ ಒಮ್ಮೆ ಬೇಡಲು ಬರುವಾಗ
ದುರಾನಿಯ ಅಕ್ಕಪಕ್ಕ ಮೂರ್‍ನಾಲ್ಕು ನಾಯಿಗಳು
ನಮ್ಮ ಗೋಡೆ ಮೇಲಿನ ದತ್ತಾತ್ರೇಯನ ಪಟದ ಹಾಗೆ!
ದುರಾನಿ ಮುಸಲ್ಮಾನರಂತೆ, ಅವರು
ನಮಾಜು ಮಾಡುತ್ತಾರಂತ ನೋಡಲು
ನಾವೆಲ್ಲ ಹುಡುಗರು ಎಷ್ಟೋಸಲ
ಅವರ ಹಿಂದೆಯೇ ಹೋದದ್ದುಂಟು.
ಊರ ಹೊರಗಿನ ಗೋಳಿಮರದ ಕಟ್ಟೆಮೇಲೆ
ತಮ್ಮ ಅಲ್ಯುಮಿನಿಯಂ ಬಟ್ಟಲು ಇಟ್ಟು
ಅಮ್ಮನಂಥವರು ಕೊಟ್ಟ ತಿನ್ನಬಲ್ಲ ಪದಾರ್ಥವೆಲ್ಲ
ಒಟ್ಟಿಗೆ ಅದರಲ್ಲಿ ಸುರಿದು ತಿಂದು
ನಲ್ಲಿಯ ಬಳಿ ನೀರು ಕುಡಿದು, ಅದೇ
ಕಟ್ಟೆ ಮೇಲೆ ಮಲಗುವ ಫಕೀರ ಹೆಣ್ಣು. ಆಗ
ನಮಾಜೆಂದರೆ ಇದೇ ಅಂತ ನಮ್ಮ ಗ್ರಹಿಕೆ.

ಈಗ ನೆನೆದರೆ ನೆನೆಯುತ್ತೇನೆ ಅಕ್ಕನನ್ನು
ಹಸಿವಾದರೆ ಭಿಕ್ಷಾನ್ನಗಳುಂಟು
ನೀರಡಿಕೆಯಾದರೆ ಕೆರೆ ಬಾವಿಗಳುಂಟು
... ಆತ್ಮ ಸಂಗಾತಕ್ಕೆ ಯಾರುಂಟು?

❑



# ದಯಾಬಾಯಿ
## ಹೋರಾಟದ ಬೆಂಕಿ

● ಸೇತುಮಾಧವ

'ರೆಡ್ ಇಂಡಿಯನ್' ಬುಡಕಟ್ಟು ಜನರ ಮುಖವನ್ನು ಹೋಲುವ ಕೇರಳದ ಕ್ರಿಶ್ಚಿಯನ್ ಮೂಲದ ಮರ್ಸಿ ಮ್ಯಾಥ್ಯೂ ಅಲಿಯಾಸ್ ದಯಾಬಾಯಿ ಅವರಿಗೆ ಈಗ 63 ವರ್ಷ. ಕಳೆದ ಇಪ್ಪತ್ತು ವರ್ಷಗಳಿಂದಲೂ ಮಧ್ಯಪ್ರದೇಶದ 'ಬೆಂದ್ವಾರ' ಜಿಲ್ಲೆಯ 'ಗೊಂಡ್' ಗಿರಿಜನರೊಂದಿಗೆ ಸಹಬಾಳ್ವೆ ನಡೆಸುತ್ತಾ, ಅವರ ಮೂಲಭೂತ ಹಕ್ಕುಗಳ ಆಗ್ರಹಕ್ಕೆ ಜಾಗೃತಿಯನ್ನು ಮೂಡಿಸುತ್ತಾ, ಸ್ವಾವಲಂಬಿ ಬದುಕಿನ ಆಶಯವನ್ನು ಸಾಕಾರಗೊಳಿಸುವಲ್ಲಿ 'ಜೈವಿಕ ಬೇಸಾಯ'ವನ್ನು ಅಳವಡಿಸಿಕೊಂಡಿರುವ ದಯಾಬಾಯಿ, ದನಿಯಿಲ್ಲದವರ ಧ್ವನಿಯಾಗಿದ್ದಾರೆ.

ದಯಾಬಾಯಿ ವಾಸಿಸುವ 'ಗೊಂಡ್' ಹಾಡಿಗಳಿಗೆ ಭೇಟಿ ನೀಡಿದರೆ, ಆಕೆಯ ಪರಿಸರದೊಂದಿಗಿನ ತಾದ್ಯಾತ್ಮ್ಯ ಅತ್ಯಾಶ್ಚರ್ಯ ತರುತ್ತದೆ. ಗಿರಿಜನರಂತೆ, ಅವರಲ್ಲಿ ಒಂದಾಗಿ ಅತಿ ಸರಳ ಬದುಕನ್ನು ಸಾಗಿಸುತ್ತಿರುವ ದಯಾಬಾಯಿ, ನಿಮ್ಮೆದುರಿಗೆ ಸಿಕ್ಕರೂ, ಯಾರೋ ಸ್ಥಳೀಯರಿರಬೇಕೆಂದು ಅಷ್ಟಾಗಿ ಗಮನ ಕೊಡದಿರುವ ಸಾಧ್ಯತೆಯೂ ಇದೆ.

ಇಂತಹ ಬದುಕು ಪ್ರಾರಂಭದಲ್ಲಿ 'ಮರ್ಸಿ' ಅವರಿಗೆ ತ್ರಾಸದಾಯಕವೇ ಆಯಿತು. ಪ್ರಜ್ಞಾ ಪೂರ್ವಕ ಪ್ರಯತ್ನದಿಂದ ಮೊದಲಿಗೆ 'ಮರ್ಸಿ' ಎನ್ನುವ ತಮ್ಮ ಮೂಲ ಹೆಸರನ್ನು 'ದಯಾಬಾಯಿ' ಎಂದು ಸ್ಥಳೀಕೃತಗೊಳಿಸಿಕೊಂಡರು. 'ಬೆಂದ್ವಾರ' ಜಿಲ್ಲೆಯ 'ಬರೂಲ್' ಎಂಬ 'ಗೊಂಡ್' ಬುಡಕಟ್ಟುಗಳ ಹಾಡಿಯಲ್ಲಿ 20 ವರ್ಷಗಳಿಂದಲೂ ತಮ್ಮ ಬದುಕನ್ನೇ ಪಣಕ್ಕಿಟ್ಟು ಹಕ್ಕುಗಳಿಗಾಗಿ ಹೋರಾಡುತ್ತಿರುವ ದಯಾಬಾಯಿ, ಹಲವಾರು ಬಾರಿ ಪ್ರಾಣಾಂತಿಕ ಸನ್ನಿವೇಶಗಳಿಗೂ ಸಿಲುಕಿದ್ದಾರೆ.

ಇಲ್ಲಿಗೆ ಮೊಟ್ಟ ಮೊದಲ ಬಾರಿಗೆ ಬಂದಾಗ, ಗಿರಿಜನರಂತೆ ತಾವೂ ಆಗಿ, ಅವರ ದುಗುಡ ದುಮ್ಮಾನಗಳನ್ನೂ ತಮ್ಮದಾಗಿಸಿಕೊಂಡದ್ದು ನಿಜಕ್ಕೂ ಆಕೆಯ ದೃಢ ಚಿತ್ತಕ್ಕೆ ಸಾಕ್ಷಿಯಾಗಿದೆ. ಅವರೇ ಹೇಳಿರುವಂತೆ ವಿಭಿನ್ನ ರೀತಿಯ ಅನುಭವಗಳು ಅವರ ಬದುಕಿನ ವಿಭಿನ್ನ ಮುಖಗಳಿಗೆ ಅಡ್ಡಿಯಾಗಿ ಮೂಡಿವೆ. ಮೊದಲ ದಿನವೇ ಯಾರೋ ಒಬ್ಬರು ಹೇಳಿದರು "ನಾವು ಈ ಕಾಡಿನ ಕೋತಿಗಳು, ನೀವ್ಯಾಕೆ ಬಂದಿರಿ?" ಎಂದು. ಈ ಹೇಳಿಕೆಯೇ ದಯಾಬಾಯಿಯ ಬದುಕಿನ ಮಂತ್ರವಾಯಿತು. ತನ್ನ ಮತ್ತು ಗಿರಿಜನರ ನಡುವೆ ಯಾವುದೇ ರೀತಿಯ ಕಂದರವಿರಬಾರದು. ಎಂದು ನಿರ್ಧರಿಸಿ, ತಮ್ಮನ್ನೇ ಪರಿಪೂರ್ಣವಾಗಿ ವರ್ಗಾತೀತ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡರು. ಅಂದರೆ "ತನ್ನ ಘನತೆಯನ್ನು ಕಡಿತಗೊಳಿಸುತ್ತಾ ಗಿರಿಜನರ ಘನತೆಯನ್ನು ವೃದ್ಧಿಸುವುದು". ಹಾಗೆಯೇ ನಡೆದುಕೊಂಡರು.

ದಯಾಬಾಯಿ ಮೂಲತಃ ಕೇರಳದ ಸಾಂಪ್ರದಾಯಿಕ ಕ್ರಿಶ್ಚಿಯನ್ ಕುಟುಂಬದವರು. ಅವರ ಬಾಲ್ಯ ಕೌಟುಂಬಿಕ ಪರಿಸರದಲ್ಲಿ ಸಂತಸವಾಗಿಯೇ ಇತ್ತು. ಬಾಲ್ಯದಿಂದಲೂ ಜನಸೇವೆಯ ಬಗ್ಗೆ ತೀವ್ರ ತುಡಿತವನ್ನು ವ್ಯಕ್ತಪಡಿಸುತ್ತಿದ್ದರು. ಇಂದಿಗೂ ಅವರ ಆ ತುಡಿತವೇ ಅವರನ್ನು ಕಾಪಾಡಿಕೊಂಡು ಬರುತ್ತಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ಪ್ರೌಢಾವಸ್ಥೆಗೆ ಬಂದಾಗ, ಸಹಜವೆಂಬಂತೆ, ಧಾರ್ಮಿಕ ಸಂಸ್ಥೆಗೆ ಪಾದಾರ್ಪಣೆ ಮಾಡಿದರು. ಸಾಂಪ್ರದಾಯಿಕ ಶಿಕ್ಷಣವನ್ನು ಪಡೆದರು. ಇದು ಅವರ ಮೇಲೆ ಅಗಾಧ ಪ್ರಭಾವ ಬೀರಿತು. ಹಾಗೆಯೇ ಅತೃಪ್ತಿಯೂ ಇತ್ತು. ಸತತ ಚಿಂತನೆ, ಮಂಥನಗಳಿಂದ 'ಧಾರ್ಮಿಕ ಸಂಸ್ಥೆ'ಯ ಬಗ್ಗೆ ವಿಮರ್ಶಾತ್ಮಕ ದೃಷ್ಟಿ ಬೆಳೆಸಿಕೊಂಡರು. ತಮ್ಮ ಈ ಅನುಭವವನ್ನು ಹೃದಯಸ್ಪರ್ಶಿಯಾಗಿ ನಿರೂಪಿಸುವ ದಯಾಬಾಯಿ, ತಮ್ಮನ್ನು ಬದಲಾವಣೆಯ ಸುಳಿಗೆ ಸಿಕ್ಕಿಸಿದ, ಧಾರ್ಮಿಕ ಸಂಸ್ಥೆಯ ಚೌಕಟ್ಟನ್ನು ಮೀರುವ, ಏಕಾಂಗಿಯಾಗಿ ಮಧ್ಯಪ್ರದೇಶದ ಕುಗ್ರಾಮದಲ್ಲಿ ಬದುಕು ರೂಪಿಸುವ ಸಂಗತಿಗಳನ್ನು ಮನೋಜ್ಞವಾಗಿ ತಿಳಿಸುತ್ತಾರೆ. ತಮ್ಮ ಹಿತೈಷಿಗಳು ಬೇಡವೆಂದರೂ, ತಾವು ಕಂಡ ಕನಸಿನ ಬಗ್ಗೆ, ಗುರಿಯ ಬಗ್ಗೆ ಆಕೆ ಸ್ಪಷ್ಟವಾಗಿದ್ದರು. ಕಡು ಬಡವರೊಂದಿಗೆ ಸಹಬಾಳ್ವೆ ನಡೆಸುವುದೇ ಪರಿಣಾಮಕಾರಿ ಮಾರ್ಗವೆಂದು ಇಂದಿಗೂ ಸಾಬೀತು ಪಡಿಸುತ್ತಿದ್ದಾರೆ.

ಅರಣ್ಯ ಪ್ರದೇಶದಲ್ಲಿ ಸಾಮಾನ್ಯವೆಂಬಂತೆ, ಬಹು ಮುಖ್ಯ ಶೋಷಕರಲ್ಲಿ ಒಂದು – ಅರಣ್ಯ ಇಲಾಖೆ. ಅನಿಯತವಾಗಿ ನೀಡುವ ಕೂಲಿ, ಅದರಲ್ಲೂ ಅರಣ್ಯಾಧಿಕಾರಿಗಳಿಗೆ 'ಮಾಮೂಲು' ಎಂದು ಕಡಿತ. ಇಂತಹ ಸನ್ನಿವೇಶದಲ್ಲಿ ದಯಾಬಾಯಿ ಅಂದಿನಂದಿನ ಕೂಲಿಯನ್ನು ಅಂದೇ ನೀಡಬೇಕೆಂದು ಒತ್ತಾಯಿಸಿದರು. ಗಿರಿಜನರನ್ನು, ಸ್ಥಳೀಕರನ್ನು ಒಗ್ಗೂಡಿಸಿದರು. ಮುಂಚಿನ ಅಭ್ಯಾಸದಂತೆ ಮಾರುಕಟ್ಟೆ ಸ್ಥಳದಲ್ಲಿ ನೀಡುವ ಕೂಲಿಪದ್ಧತಿಯನ್ನು ವಿರೋಧಿಸಿದರು. ಇನ್ನೊಂದು ಪ್ರಮುಖ ಹೋರಾಟವೆಂದರೆ, 'ಟೆಂಡು' ಎಲೆಗಳದ್ದು. ಈ ಎಲೆಗಳನ್ನು ಬೀಡಿ ಸುತ್ತಲು ಬಳಸುತ್ತಾರೆ. ಬಹು ಬೇಡಿಕೆಯೂ ಇದೆ. ಮಧ್ಯ ಭಾರತದ ಕಾಡುಗಳಲ್ಲಿ ಸಹಜ ಸಂಪನ್ಮೂಲವಾಗಿರುವ ಈ ಎಲೆ ಗಿರಿಜನರ ಶೋಷಣೆಗೂ ಕಾರಣವಾಗಿತ್ತು. ಗಿರಿಜನ ಮಹಿಳೆಯರು ಈ ಎಲೆಗಳನ್ನು ಸಂಗ್ರಹಿಸಿದರೂ, ಅದಕ್ಕೆ ಸರಿಯಾದ ಕೂಲಿ

ಸಿಗುತ್ತಿರಲಿಲ್ಲ. ಇದನ್ನು ಕಂಡ ದಯಾಬಾಯಿ ಆ ಜನರಿಗೆ ಶೋಷಣೆಯ ಬಗ್ಗೆ ವಿವರಿಸಿದರು. ಅರಣ್ಯ ಅಧಿಕಾರಿಗಳು ನೀವು ಸಂಗ್ರಹಿಸಿದ 'ಟೆಂಡು' ಎಲೆಗಳನ್ನು ತೆಗೆದುಕೊಂಡು ಹೋದರೆ, ನಿಮಗೆ ಕೂಲಿಯೂ ಇರುವುದಿಲ್ಲ ಎಂದು ತಿಳಿಸಿ ಹೇಳಿದರು. ಅಂತಹ ಸಂದರ್ಭದಲ್ಲಿ ನಡೆದ ಹೋರಾಟವನ್ನು ದುಜಿಯಾ ಎಂಬ ಗಿರಿಜನ ಮಹಿಳೆ ಹೀಗೆ ಚಿತ್ರಿಸುತ್ತಾಳೆ: "ಅಂದು ರಾತ್ರಿ ಲಾರಿ ಬಂದಾಗ, ದಯಾಬಾಯಿ ಮೊದಲು ನನ್ನನ್ನು ಕರೆದರು. ನಾನು ಇತರೆ ಮಹಿಳೆಯರನ್ನು ಕರೆದೆ. ನಾವೆಲ್ಲ 'ಟೆಂಡು' ಎಲೆಗಳನ್ನು ಮೂಟೆಗಳಲ್ಲಿ ಸಂಗ್ರಹಿಸಿಟ್ಟ ಸ್ಥಳದಲ್ಲಿ ಒಗ್ಗೂಡಿದೆವು. ಮೊದಲಿಗೆ ದಯಾಬಾಯಿ ಹಾಗೂ ಇನ್ನಿತರ ಮಹಿಳೆಯರು ಮೂಟೆಗಳ ಮೇಲೆ ಕೂತರು. ಇದರಿಂದ ಆ ಅಧಿಕಾರಿ ಎಲೆಗಳನ್ನು ಒಯ್ಯುವುದು ಕಷ್ಟ. ಎಲ್ಲರೂ ಸರಪಳಿಯಂತೆ ಕೈ-ಕೈ ಜೋಡಿಸಿ ವೃತ್ತಾಕಾರದಲ್ಲಿ ನಿಂತೆವು. ಗಟ್ಟಿ ಸ್ವರದಲ್ಲಿ ಹಾಡಲಾರಂಭಿಸಿದೆವು. ಹೀಗೆ, ನಮಗೆ ನ್ಯಾಯಯುತವಾಗಿ ದಕ್ಕಬೇಕಾದ್ದನ್ನು ಹೋರಾಡಿ ಪಡೆದುಕೊಂಡೆವು. ದಯಾಬಾಯಿ ನಮಗೆ ಬಹಳಷ್ಟು ವಿಚಾರಗಳನ್ನು ತಿಳಿಸಿದ್ದಾರೆ. ನಮ್ಮ ಹೋರಾಟಗಳಲ್ಲೂ ನೇರವಾಗಿ ಪಾಲ್ಗೊಂಡಿದ್ದಾರೆ. ನಮ್ಮ ಮಕ್ಕಳಿಗೆ ಓದು, ಬರಹ ಕಲಿಸಿದ್ದಾರೆ."

ದಯಾಬಾಯಿಯವರ ಪ್ರತಿಭೆಯ ಮತ್ತೊಂದು ಮುಖವೆಂದರೆ, ಬೀದಿನಾಟಕದ ಬಗೆಗಿನ ಅವರ ಅದಮ್ಯ, ಅಪಾರ ನಂಬಿಕೆ, ಗೌರವ. ಜನರಲ್ಲಿ ಜಾಗೃತಿ ಮೂಡಿಸಲು ಬೀದಿನಾಟಕ ಪರಿಣಾಮಕಾರಿ ಮಾಧ್ಯಮ ಎಂದು ನಂಬಿದವರು ಆಕೆ. ದಯಾಬಾಯಿಯವರ ನಟನೆ, ಅಭಿನಯವನ್ನು ನೋಡುವುದೇ ಒಂದು ಅನನ್ಯ ಅನುಭವ. ಕುಡಿತ, ಪರಿಸರ, ಮತೀಯತೆ ಮುಂತಾದ ವಿಷಯಗಳನ್ನು ಆಯ್ಕೆಮಾಡಿಕೊಂಡು ಬೀದಿನಾಟಕಗಳನ್ನು ರಚಿಸಿ, ನಿರ್ದೇಶಿಸಿದ್ದಾರೆ.

2002ರಲ್ಲಿ ಗುಜರಾತಿನಲ್ಲಿ ನಡೆದ ಮತೀಯ ಗಲಭೆಯ ನಂತರ ಆಕೆ ಅಲ್ಲಿಗೆ ಭೇಟಿ ನೀಡಿದರು. ಹಲವಾರು ಸಂತ್ರಸ್ತ ಹಳ್ಳಿಗಳಿಗೆ ಭೇಟಿ ನೀಡಿ, ತಮ್ಮ ಹಳ್ಳಿಗಳನ್ನು ಮತೀಯತೆಯ ಕ್ಷೋಭೆಯಿಂದ ವಿಮುಕ್ತಿಗೊಳಿಸುವ ಮಾರ್ಗೋಪಾಯಗಳನ್ನು ಚರ್ಚಿಸಿದರು. ಅದೇ ಸಮಯಕ್ಕೆ 'ರಾಷ್ಟ್ರೀಯ ಜನಪರ ಹೋರಾಟಗಳ ಸಮನ್ವಯ ಸಮಿತಿ'ಯು ದೇಶದೆಲ್ಲೆಡೆಯಿಂದ ಜನಪರ ಚಳವಳಿಗಳನ್ನೊಳಗೊಂಡಂತೆ 'ಚಿತ್ರಕೂಟ'ದಿಂದ 'ಅಯೋಧ್ಯೆ'ಗೆ ಶಾಂತಿ ನಡಿಗೆಯನ್ನು ಸಂಘಟಿಸಿತು. ದಯಾಬಾಯಿ ತಾವು ಗುಜರಾತಿನಲ್ಲಿ ಅನುಭವಿಸಿದ್ದ ಯಾತನೆಯನ್ನು ಬೀದಿನಾಟಕ ರೂಪಕ್ಕೆ ಅಳವಡಿಸಿ ತಾವೇ ಏಕಪಾತ್ರಧಾರಿಯಾಗಿ ವೇದಿಕೆಗೆ ಬಂದರು. ದೊಡ್ಡಸ್ವರದಲ್ಲಿ "ನಾನು ನನ್ನ ಜೊತೆ ಅಹಮದಾಬಾದಿನಿಂದ ಮಹಿಳೆಯೊಬ್ಬಳನ್ನು ಕರೆತಂದಿದ್ದೇನೆ" ಎಂದು ಆರಂಭಿಸಿ, ಒಂದು ಸುತ್ತು ತಿರುಗಿ, ತಾನೇ 'ಸದಾಬನ' ಎಂಬ ಪಾತ್ರವಾಗಿ "ನನ್ನ ಕುಟುಂಬದಲ್ಲಿ ಬದುಕುಳಿದಿರುವಳು ನಾನೊಬ್ಬಳೇ. ನನ್ನ ಕಣ್ಣ ಮುಂದೆ ಹೂವಿನಂತಿದ್ದ ನನ್ನ ಮಗಳನ್ನು ಮಾನಭಂಗ ಮಾಡಿದರು. ನನ್ನ ಗಂಡ ಮತ್ತು ಉಳಿದ ಕುಟುಂಬದ ಸದಸ್ಯರೆಲ್ಲರನ್ನು ಅಮಾನುಷವಾಗಿ ಕತ್ತರಿಸಿಹಾಕಿದರು. ನನ್ನನ್ನು ಬಲಾತ್ಕಾರಕ್ಕೆ ಒಳಗಾಗಿಸಿದರು, ಈಗಿರುವುದು ನನಗೆ ಒಂದೇ ಕೈ. ಗೆಳೆಯರೇ, ನಾನೀಗ ಜನರ ನಡುವೆ ಸಾಮರಸ್ಯವನ್ನು ಶಾಂತಿಯನ್ನು ತರಬೇಕೆಂದಿದ್ದೇನೆ" ಎಂದು ಹೃದಯಸ್ಪರ್ಶಿಯಾಗಿ ಅಭಿನಯಿಸಿ ನೋಡುಗರ ಮನ ಸೆಳೆದರು.

ಜನಪರ ಹೋರಾಟಗಳನ್ನು ಹತ್ತಿಕ್ಕುವ ಹಕ್ಕು ತಮ್ಮದು ಎಂದು ಪರಿಭಾವಿಸಿರುವ ಪೊಲೀಸರ ಲಾಠಿ ಏಟುಗಳು ದಯಾಬಾಯಿಯವರನ್ನೂ ಬಿಟ್ಟಿಲ್ಲ. 1999ರಲ್ಲಿ ದೂರನ್ನು ದಾಖಲಿಸಲು ಪೊಲೀಸ್ ಠಾಣೆಗೆ ಹೋದಾಗ, ಆಕೆಯನ್ನು ಪೊಲೀಸರು ಅಮಾನುಷವಾಗಿ ಥಳಿಸಿದ್ದರು. ತಮ್ಮ ನಿರಂತರ ಹೋರಾಟದ ಜೊತೆ ಜೊತೆಯಲ್ಲಿಯೇ ಸಾವಯವ ಕೃಷಿಯ ಬಗ್ಗೆ ಅತೀವ ಆಸಕ್ತಿಯನ್ನು ಹೊಂದಿರುವ ದಯಾಬಾಯಿಯವರು ತಮ್ಮದೇ ಆದ ಸಣ್ಣ ಹಿಡುವಳಿಯಲ್ಲಿ ಪರಿಸರ ಪೂರಕ ಸಾವಯವ ಕೃಷಿಯನ್ನು ಆರಂಭಿಸಿ, ಜನರಿಗೆ ಅದರ ಜ್ಞಾನ ಹಾಗೂ ತಾಂತ್ರಿಕತೆಯನ್ನು ತಿಳಿಸಿಕೊಡುತ್ತಿದ್ದಾರೆ.

ಇವರ ಅವಿರತ ಪರಿಶ್ರಮ, ಅದ್ಭುತ ಪ್ರತಿಭೆಯನ್ನು ಗುರುತಿಸಿ, ಹಲವಾರು ಪ್ರಶಸ್ತಿಗಳು ಸಂದಿವೆ. 2001ರಲ್ಲಿ ಧರ್ಮಭಾರತಿಸಂಸ್ಥೆಯವರು ರಾಷ್ಟ್ರಮಟ್ಟದಲ್ಲಿ ಉತ್ತಮ ಸಮಾಜ ಸೇವಕಿ ಎಂಬ ಪ್ರಶಸ್ತಿಯನ್ನು ನೀಡಿದರು. ದಯಾಬಾಯಿ ಅವರ ಮಾನವ ಹಕ್ಕುಗಳ ನಿರಂತರ ಹೋರಾಟವನ್ನು ಗುರುತಿಸಿ Nigil India ಸಂಸ್ಥೆಯು ಪ್ರತಿಷ್ಠಾಪಿಸಿರುವ ಎಂ.ಎ. ಥಾಮಸ್ ರಾಷ್ಟ್ರೀಯ ಮಾನವ ಹಕ್ಕುಗಳ ಪ್ರಶಸ್ತಿಯನ್ನು ನೀಡಿ ಪುರಸ್ಕರಿಸಿದೆ (2007). ಆಕೆ ಹಲವಾರು ಶೈಕ್ಷಣಿಕ ಕೇಂದ್ರಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಗೆ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ.

ಅವರ ಅನುಕರಣೀಯ ಬದುಕನ್ನು ಆಧರಿಸಿ ಇತ್ತೀಚೆಗೆ ಒಂದು ಪುಸ್ತಕ ಹಾಗೂ ವಿಡಿಯೋ ಚಿತ್ರವನ್ನು ನಿರ್ಮಿಸಲಾಗಿದೆ. ಆ ಪುಸ್ತಕದಲ್ಲಿ ಅವರು ತಮ್ಮ ಅನುಭವವನ್ನು ಮೆಲುಕು ಹಾಕುತ್ತಾ "ನನ್ನ ಮತ್ತು ಜನರ ನಡುವಿನ ಕಂದರವನ್ನು ಕಡಿತಗೊಳಿಸುತ್ತಾ ಬಂದೆ... ಅಂದರೆ ಬೇರೆಯದೆ ಜೀವನ ಶೈಲಿಯನ್ನು ಅಳವಡಿಸಿಕೊಂಡೆ. ಯಾವುದೇ ಆರ್ಥಿಕ ಸಹಾಯವಿಲ್ಲದೆ, ನನ್ನ ಉಳಿವಿಗೂ ಹೋರಾಡಬೇಕಾಯಿತು. ಹಲವಾರು ಬಾರಿ ಒಂದು ಹೊತ್ತಿನ ಊಟಕ್ಕೂ ಸಾಧ್ಯವಾಗದೆ ಬೆಲ್ಲ, ನೀರಲ್ಲೇ ಹೊಟ್ಟೆ ತುಂಬಿಸಿಕೊಂಡಿದ್ದೇನೆ." ಎಂದು ತಮ್ಮ ಎದೆಯಾಳದ ನೋವನ್ನು ತೆರೆದಿಟ್ಟಿದ್ದಾರೆ.

❑



## ಸತ್ಯ

ನಾ ಸತ್ಯವ ನುಡಿಯುವೆ
ಸತ್ಯವಾಗಿ ನಡೆಯುವೆ
ದೇವರಿದ್ದಾನೆಂದೆ
ವಿಚಿತ್ರವಾಗಿ ನೋಡಿದರು
ನನ್ನನ್ನ
ನೆಗೆಯಾಡಿದರು;
ಏರಿದರು ಏತ್ತರಕ್ಕೆ
ಏರಿದರು
ಜಾರಿದರು
ಎದ್ದರು
ಬಿದ್ದರು
ನಡೆದೇ ಇದೆ ಅವರ ನಾಟಕ
ನಾ ಮಾತ್ರ
ಇದ್ದಲ್ಲೇ ಇದ್ದೇನೆ

-ಶೋಭಾ ಕುಲಕರ್ಣಿ

# ಪ್ರಶ್ನೆಗಳಾಗೇ ಉಳಿಯುವ ಮಾಧವಿಯ ಆತ್ಮಕಥೆ

● ಲಲಿತಾ ಸಿದ್ಧಬಸವಯ್ಯ

*ಚಿತ್ರಬ್ರಹ್ಮ, ಫಾಲ್ಕೆ ಪ್ರಶಸ್ತಿ ಪುರಸ್ಕೃತ, ಭಾಲಜಿ ಪೆಂಡಾರ್ಕರ–ಅಭಿನೇತ್ರಿ ಲೀಲಾ ಅವರ ಮಗಳು, ಸುಪ್ರಸಿದ್ಧ ಮರಾಠೀ ಲೇಖಕ ಪದ್ಮಶ್ರೀ ರಣಜಿತ ದೇಸಾಯಿ ಅವರ ಹೆಂಡತಿ ಮಾಧವಿ ಅವರ ಆತ್ಮಕಥೆ 'ನಾಚ ಗ ಘುಮಾ', ಮಹಾರಾಷ್ಟ್ರಾದ್ಯಂತ ಸಂಚಲನ ವನ್ನೇ ಹುಟ್ಟಿಸಿತ್ತು, ಪ್ರಸಿದ್ಧರ ಬದುಕಿನ ತೆರೆಸರಿಸಿ ಭಯಾನಕ ವಂಚಕ, ಲೋಕವೊಂದನ್ನು ಅನಾವರಣಗೊಳಿಸಿತ್ತು. ಚಂದ್ರಕಾಂತ ಪೋಕಳೆಯವರ ಅನುವಾದಿತ ಕೃತಿ 'ಕುಣಿಯೇ ಘುಮಾ' ಕುವೆಂಪು ವಿಶ್ವವಿದ್ಯಾಲಯದ ಪದವಿ ತರಗತಿಗಳಿಗೆ ಪಠ್ಯವೂ ಆಗಿದೆ. ಈ ಕೃತಿಯ ಪರಿಚಯ, ಒಳನೋಟ ಗಳನ್ನು ಕವಯಿತ್ರಿ ಲಲಿತಾ ಸಿದ್ಧಬಸವಯ್ಯನವರು 'ನಮ್ಮ ಮಾನಸ'ಕ್ಕಾಗಿ ಸಿದ್ಧಪಡಿಸಿದ್ದಾರೆ.*

ದಾದಾಸಾಹೇಬ ಫಾಲ್ಕೆಯವರೊಂದಿಗೆ ಹೋಲಿಸಬಹುದಾದ ಮರಾಠಿ ಚಲನಚಿತ್ರ ರಂಗದ ಪ್ರವರ್ತಕ ಭಾಲಜಿ ಪೆಂಡಾರಕರ ಅವರ ಮಗಳೂ, ಹುಟ್ಟ ಇನಾಮ್ದಾರರೂ, ತಮ್ಮ ಲೇಖನಿಯಿಂದ ಆದ್ಯ ಸಾಹಿತಿಯೂ ಆಗಿದ್ದ ರಣಜಿತದೇಸಾಯರ ಪತ್ನಿಯೂ ಆಗಿದ್ದ ಮಾಧವಿಯವರ ಆತ್ಮಕಥೆ ಮಹಾರಾಷ್ಟ್ರೀಯರಲ್ಲಿ ಕುತೂಹಲವನ್ನು ಹುಟ್ಟಿಸಿ ವಾದ ವಿವಾದಗಳಿಗೆ ಪಕ್ಕಾಗಿ ಸಂಕಿರಣಗಳ ಗ್ರಾಸವಾಗಿ ಗೌರವಕ್ಕೂ ಟೀಕೆಗೂ ಒಳಗಾಯಿತು. ಪ್ರಕಟವಾದ ಐದು ತಿಂಗಳಿನಲ್ಲಿ 1500 ಪ್ರತಿಗಳು ಮಾರಾಟವಾಗಿದ್ದು ಈವರೆಗೆ 50,000 ಪ್ರತಿಗಳು ಮಾರಾಟವಾಗಿರುವ ದಾಖಲೆಯಿದೆ. ರಣಜಿತರು ಒಂದು ಕೈಯಿಂದ ಗೌರವಾನ್ವಿತ ನಾಯಕಿಯರನ್ನು ಸೃಜಿಸಿ ಮರಾಠಾ ಜನತೆಯ ಹೃದಯಕ್ಕೆ ಹೊಗಿಸುತ್ತಿದ್ದರೆ ಇನ್ನೊಂದು ಕೈಯಿಂದ ತಮ್ಮ ಬದುಕಿನ ನಾಯಕಿಯರಾದ ಇಬ್ಬರು ವಿವಾಹಿತ ಪತ್ನಿಯರ ಜೀವನವನ್ನು ಮೂರಾಬಟ್ಟೆ ಮಾಡಿದ ವಿವರಗಳನ್ನು 'ನಾಚ ಗ ಘುಮಾ' ತೆರೆದಿಟ್ಟು ಬಹುದೊಡ್ಡ ಲೇಖಕನ ಬದುಕಿಗೂ ಬರವಣಿಗೆಗೂ ಇರುವ ಕಂದಕವನ್ನು ಅನಾವರಣ ಗೊಳಿಸಿತ್ತು.

ಈ ಪುಸ್ತಕಕ್ಕೂ ಮೊದಲು ಮಾಧವಿಯವರ ಕೆಲವು ಕಥೆ ಕಾದಂಬರಿಗಳು ಪಕ್ರಟವಾಗಿದ್ದವು. ಅನಂತರವೂ ಎರಡು ಕಾದಂಬರಿಗಳು ಪ್ರಕಟವಾದರೂ ಅವು ಯಾವುವೂ ಸಾಹಿತ್ಯಿಕವಾಗಿ ಅಂತಹ ಮನ್ನಣೆಯೇನೂ ಗಳಿಸಿಲ್ಲ. ಈ ಆತ್ಮಕಥೆ ಲೇಖಕಿಯನ್ನು ಮರಾಠಿ ಸಾಹಿತ್ಯದಲ್ಲಿ ಗುರುತಿಸುವಂತೆ ಮಾಡಿದೆ. ಈ ಆತ್ಮಕಥೆಯು ಏಕಮುಖವಾಗಿದ್ದು ಅತಿರಂಜಿತ ಶೈಲಿ, ವೈಭವೀಕರಣಗಳಿಂದಾಗಿ ಸ್ವಾನುಕಂಪವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಬರೆದಂತಿದ್ದು ರಣಜಿತರ ದೋಷಗಳನ್ನು ದೊಡ್ಡದು ಮಾಡಿ, ಅವರಿಂದ ಪ್ರಾಪ್ತವಾದ ಗೌರವ ಮರ್ಯಾದೆಗಳನ್ನು ಮರೆಯಲ್ಲಿಟ್ಟಿದೆಯೆಂಬ ಒಂದು ವಾದವಿದ್ದು ಈ ವಾದವನ್ನು ಬೆಂಬಲಿಸುವವರ ಸಂಖ್ಯೆಯೂ ದೊಡ್ಡದಿದೆ. ಹಾಗೆಯೇ ದೊಡ್ಡ ಹೆಸರಿನ ಅಡಿಯಲ್ಲಿ ತಣ್ಣಗೆ ಕ್ರೌರ್ಯವೆಸಗುತ್ತ, ಸದ್ದಿಲ್ಲದೆ ಪತ್ನಿಶೋಷಣೆ ಮಾಡುವ ಇಬ್ಬಂದಿತನವನ್ನು ಎಳೆ ಎಳೆಯಾಗಿ ಬಿಡಿಸಿಟ್ಟಿರುವ ಲೇಖಕಿಯ ಧೈರ್ಯ, ಆತ್ಮಗೌರವ ಜೋಪಾಸನೆ, ಕೃತಿಯ ಪ್ರಕಟಣೆಯಲ್ಲಿ ಎದುರಾದ ಎಲ್ಲ ಪ್ರತಿರೋಧಗಳನ್ನು ಹತ್ತಿಕ್ಕಿದ ಅವರ ಗಟ್ಟಿತನಗಳನ್ನು ಬೆಂಬಲಿಸುವ ಒಂದು ಬಹುದೊಡ್ಡ ಬರಹಗಾರರು, ಓದುಗರ, ಸ್ತ್ರೀವಾದಿಗಳ ಸಮೂಹವೇ ಇದೆ. ಒಟ್ಟಿನಲ್ಲಿ ಮಾಧವೀ ದೇಸಾಯಿಯರ ಈ ಆತ್ಮಕಥೆ ಮಹಾರಾಷ್ಟ್ರದ ಸಾಮಾಜಿಕ ಮತ್ತು ಸಾಹಿತ್ಯಿಕ ವಾತಾವರಣವನ್ನು ಕಲಕಿದ್ದಂತೂ ದಿಟ.

'ಕುಣಿಯೇ ಘುಮಾ' ಕಾದಂಬರಿಗಳಿಗೆ ಹೇಳಿ ಮಾಡಿಸಿದ ಫ್ಲ್ಯಾಷ್‌ಬ್ಯಾಕ್ ತಂತ್ರವನ್ನು ಅನುಸರಿಸಿದೆ. ಜೊತೆಗೆ ಲೇಖಕಿಯ ಅತಿಭಾವುಕತೆಯು ಮಗ್ಗಕ್ಕೆ ಕಟ್ಟಿದ ಮೂಲಾಧಾರಕ್ಕಾಗಿ ಉದ್ದಕ್ಕೂ ನೊಣೆದುಕೊಂಡು ಕಾಲದೇಶಗಳ ಲೋಲಕ ಚಲನೆಯಿಂದಾಗಿ ಓದುಗರು ಲಾಳಿಯ ಮೇಲೆ ಹಿಂದಕ್ಕೂ ಮುಂದಕ್ಕೂ ಓಡಾಡುತ್ತ ಘಟನೆಗಳನ್ನು ತಾನೇ ಒಂದು ಕ್ರಮವಾಗಿ ಜೋಡಿಸಿಕೊಳ್ಳಬೇಕಾಗುತ್ತದೆ. ಮಾಧವಿಯವರ ಬದುಕಿನ ಪ್ರಮುಖ ತಿರುವುಗಳ ಸಮರ್ಥನೆ ಪುಸ್ತಕದಲ್ಲಿ ದೊರೆಯದೆ ಹೋಗುವುದೂ ಉಂಟು. ಇಷ್ಟಾಗಿಯೂ ಅಂಗೀಕೃತ ಸಾಮಾಜಿಕ ನಿಯಮಗಳಡಿಯಲ್ಲೇ ನೆಮ್ಮದಿಯನ್ನು ಹುಡುಕಲು ಪರದಾಡುವ 20ನೇ ಶತಮಾನದ ಅರೆ ಎಚ್ಚರಗೊಂಡ ಭಾರತೀಯ ಹೆಂಗಸಿನ ಸಂದಿಗ್ಧತೆ, ಅಮಾಯಕತೆ, ಅಸಹಾಯಕತೆ, ಸಂಭ್ರಮ, ಉಲ್ಲಾಸ, ಸಂಕಟ, ಅವಮಾನ, ಅವಹೇಳನಗಳೆಲ್ಲವನ್ನೂ 'ಕುಣಿಯೇ ಘುಮಾ' ಓದುಗನಿಗೆ ವರ್ಗಾಯಿಸುತ್ತದೆ.

ಭಾಲಜಿ ಪೆಂಡಾರಕರ ಮರಾಠಿ ಚಲನಚಿತ್ರ ಜಗತ್ತಿನ ಪ್ರವರ್ತಕ ಶಕ್ತಿ. ಪುಣೆ, ಕೊಲ್ಹಾಪುರಗಳಲ್ಲಿ ಅರುಣ ಚಿತ್ರ, ಪ್ರಭಾಕರ ಚಿತ್ರ, ಜಯಪ್ರಭಾ ಚಿತ್ರಗಳೆಂಬ ದೊಡ್ಡ ಚಲನಚಿತ್ರ ತಯಾರಿಕಾ ಸಂಸ್ಥೆಗಳನ್ನು ಸ್ಥಾಪಿಸಿ ಬೃಹತ್ ಸ್ಟುಡಿಯೋಗಳನ್ನು ನಿರ್ಮಿಸಿ ಅನೇಕ ಮರಾಠಿ ಹಾಗೂ ಹಿಂದಿ ಸಿನಿಮಾಗಳನ್ನು ತಯಾರಿಸುತ್ತಿದ್ದ ಪೆಂಡಾರಕರರ ಚಿತ್ರಗಳಲ್ಲಿ ಅವರ ಕಿರಿಯ ಪತ್ನಿ, ಅಪೂರ್ವ ಸುಂದರಿ ಲೀಲಾರವರು ಪ್ರಮುಖ ಭೂಮಿಕೆಗಳಲ್ಲಿ ಅಭಿನಯಿಸುತ್ತಿದ್ದರು. ಇದೇ ಲೀಲಾರವರ ಮೂರು ಮಕ್ಕಳಲ್ಲಿ ನಡುವಿನಾಕೆ ಸುಲೋಚನ. ಈಕೆಗೆ ಅಬೀ ಎಂಬುದು ರೂಢನಾಮ. ಈಕೆಯೇ ಮುಂದೆ ಮಾಧವಿಯಾದವಳು. ಈ ಸುಲೋಚನಾ ಮತ್ತು ಆಕೆಯ ಅಣ್ಣ ಜಯಸಿಂಹ ಬೆಳಗಾವಿಯ ಭರ್ಜರಿ ಅಜ್ಜಿಮನೆಯಲ್ಲಿ ಸುಖವಾಗಿ ಬೆಳೆಯುತ್ತಿದ್ದು, ಒಂಬತ್ತು ವರ್ಷಗಳವರೆಗೆ ತಾಯಿಯ ಫೋಟೋಗಳ ಹೊರತಾಗಿ ಆಕೆಯನ್ನು ಖುದ್ದು ನೋಡಿಯೇ ಇರಲಿಲ್ಲವಂತೆ. 'ಅಮ್ಮ ಅಂದರೇನು ಎಂದು ನಾನು ಕೇಳಿಕೊಳ್ಳುತ್ತಿದ್ದೆ, ಆಕೆ ಅಜ್ಜಿಯಿಂದ ತಮ್ಮನ್ನು ಕಿತ್ತುಕೊಂಡು ಹೋಗುವ ಭಯಂಕರಿ ಎಂದೇ ಭಾವಿಸಿದ್ದೆ' ಎನ್ನುತ್ತಾರೆ ಲೇಖಕಿ. ಅಂತೂ ಒಂದು ದಿನ ಈ ಅಜ್ಜಿಯ ಸಮೇತ ಮಕ್ಕಳನ್ನು ಲೀಲಾರವರು ಬೆಳಗಾವಿಯಿಂದ ಗುಳೇ ಹೊರಡಿಸಿ ಪುಣೆಯಲ್ಲಿ ಸ್ಥಾಪಿಸುತ್ತಾರೆ. ಬಹುಶಃ ಈ ಎರಡೂ ಮಕ್ಕಳ ತಂದೆ ಲೀಲಾರವರ ಮೊದಲ ಪತಿಯಾಗಿದ್ದಿರಬಹುದೆಂಬ ಸೂಚನೆಯೊಂದನ್ನು ಲೇಖಕಿಯೇ ನೀಡಿದ್ದಾರೆ. ಆದರೆ

ಸ್ಪಷ್ಟ ಮತ್ತು ನೇರ ನಿರೂಪಣೆಯಿಲ್ಲ. ಸದಾನಂದ ಎಂಬ ತಮ್ಮ ಸಂತಾನವನ್ನು ಸೇರಿಸಿ ಲೀಲಾರವರ ಈ ಮೂರು ಮಕ್ಕಳನ್ನು ಸಮಾನವಾಗಿ ನಡೆಸಿಕೊಂಡದ್ದು ಭಾಲಜಿಯವರ ದೊಡ್ಡತನ.

ಮಾಧವಿಯವರ ಬಾಲ್ಯವನ್ನು ಒಂದೇ ಮಾತಿನಲ್ಲಿ ಕ್ರೋಡೀಕರಿಸ ಬಹುದಾದರೆ ಅದು ಹಲ್ಲುಕಿತ್ತ, ನೋಡಿ ಮಾತ್ರ ತೃಪ್ತಿಪಡಬಹುದಾದ ಅಪೂರ್ವ ನಾಗಮಣಿಯನ್ನು ಹೊತ್ತ ಹಾವಿನ ಹೆಡೆಯಡಿಯ ಬದುಕು ಎನ್ನಬಹುದು. ಹಲ್ಲುಕಿತ್ತದ್ದರಿಂದ ವಿಷದ ಭಯವಿಲ್ಲ. ಆದರೆ ನಾಗಮಣಿಯ ಮೌಲ್ಯ ಗೊತ್ತಿದ್ದೂ ಮುಟ್ಟದ, ಬಳಸದ ಅದರಿಂದ ಲೌಕಿಕಕ್ಕೆ ಮೂರುಕಾಸಿನ ಪ್ರಯೋಜನವಿಲ್ಲ. ಲೇಖಕಿ ಕೊಲ್ಲಾಪುರದ ಊರಾಚೆಯಲ್ಲಿರುವ ವಿದ್ಯಾಪೀಠ ಮತ್ತು ಅದರ ಸುತ್ತಲಿನ ತಪೋವನ ದಲ್ಲಿ ವಿದ್ಯಾಭ್ಯಾಸಮಾಡಿದ ವಿವರಗಳನ್ನು ನೀಡುವಾಗ ಹಾವಿನ ಪ್ರಸಂಗ ವೊಂದನ್ನು ವಿವರಿಸುತ್ತಾರೆ. ಕಠಿಣಶಿಸ್ತು, ಸ್ವಯಂಸೇವೆ, ಅಹಿಂಸೆ ಇತ್ಯಾದಿ ಬಿಗಿ ನಿಯಮಗಳಿದ್ದ ಈ ವಿದ್ಯಾಪೀಠದಲ್ಲಿ ಬೆಳೆದರೆ ಮಕ್ಕಳು ಉತ್ತಮ ರಾಗುತ್ತಾರೆಂದು ಭಾವಿಸಿ ಶ್ರೀಮಂತ ಮರಾಠಾ ಸರದಾರರು ತಮ್ಮ ಮಕ್ಕಳನ್ನು ಇಲ್ಲಿ ಬಿಡುತ್ತಿದ್ದರಂತೆ. ರಾಜಸ ಸ್ವಭಾವದವರಾದ ಈ ಹುಡುಗರು ತಪೋವನಕ್ಕೆ ಬಂದ ಹಾವನ್ನು ಹೊಡೆದು ಸಾಯಿಸಿ ಸುಟ್ಟರೆ, ಗುರೂಜಿ ಇನ್ನೊಮ್ಮೆ ಅದೇ ತಪೋವನದ ವಸತಿ ಗೃಹದ ಮಕ್ಕಳ ಹಾಸುಗೆಯಲ್ಲಿ ನುಸುಳಿದ್ದ ಹಾವೊಂದಕ್ಕೆ ಹಾಲಿಟ್ಟು ಇಡೀ ರಾತ್ರಿ ಕಣ್ಣು ಮಿಟುಕಿಸದೆ ಕಾವಲು ಕೂತಿದ್ದರಂತೆ! ಮಾಧವಿಯವರ ಆತ್ಮಕಥೆ ಇಂತಹ ವೈರುಧ್ಯಗಳ ಬೊಕ್ಕಸ.

ಚಿತ್ರರಂಗದ ದಿಗ್ಗಜರೇ ಪೆಂಡಾರಕರರ ಚಿತ್ರಗಳಲ್ಲಿ ಹೆಮ್ಮೆಯಿಂದ ನಟಿಸುತ್ತಿದ್ದರು. ಮಾಧವಿಯವರಿಗೆ ಬಾಲ್ಯದಲ್ಲಿ ಚಿತ್ರರಂಗ ಕೈಗೆಟುಕು ವಂತಿತ್ತು. ಸುಪ್ರಸಿದ್ಧ ತಾರೆಯಾಗಿದ್ದ ತಾಯಿ ಮತ್ತು ನಿರ್ಮಾಪಕ, ನಿರ್ದೇಶಕರಾದ ತಂದೆ, ಇಬ್ಬರೂ ತಮ್ಮ ಕುಟುಂಬದ ಹನ್ನೊಂದು ಮಕ್ಕಳ ಮೇಲೆ ಚಿತ್ರ ಜಗತ್ತಿನ ಗ್ಲಾಮರ್ ಲವಲೇಶವು ಅಂಟದಂತೆ ಎಚ್ಚರ ವಹಿಸಿದ್ದರು. ಪೆಂಡಾರಕರರಿಗೆ ಮೂವರು ಹೆಂಡತಿಯರು. ಪತಿ ತನ್ನ ಕಣ್ಣೆದುರಿಗೇ ಇನ್ನೊಂದು ಸಂಸಾರವನ್ನು ಹೂಡುವಾಗ ಸುಮ್ಮನಿರುವ ಈ ಮಹಿಳೆಯರ ಸಹನೆಯು ರೇಜಿಗೆ ಹುಟ್ಟಿಸುತ್ತದೆ ಯೆಂಬುದು ನಿಜವಾದರೂ ಈ ಮೂವರು ಹಾಗಿದ್ದುದರಿಂದಲೇ ನಾವು ಹನ್ನೊಂದು ಮಕ್ಕಳು ಬೆಳೆದೆವು ಎಂದು ಹೇಳುವ ಮಾಧವಿಯವರು, ಎಲ್ಲರಿಗೂ ಓರ್ವ ತಾಯಿಯಿದ್ದರೆ ನನಗೆ ಮೂವರು ತಾಯಂದಿರು, ಮೂವರೂ ಅನಕ್ಷರಸ್ಥರಾಗಿದ್ದರೂ ಹೊಂದಿಕೊಂಡು ಸಂಸಾರ ಮಾಡುತ್ತಿದ್ದಾರೆ, ಈ ದೃಶ್ಯ ಕಲ್ಪನಾತೀತವಾಗಿದ್ದರೂ ಇವತ್ತಿಗೂ ನಾನವರ ಪ್ರೇಮವನ್ನು ಅನುಭವಿಸಿಯೇ ಬೆಳೆಯುತ್ತಿದ್ದೇನೆ ಎಂದು ಬರೆಯುತ್ತಾರೆ.

ಪೆಂಡಾರಕರರ ವೃತ್ತಿಜೀವನ ಪರಾಕಾಷ್ಠೆಯನ್ನು ಮುಟ್ಟಿದಾಗಲೇ ಮಹಾತ್ಮಗಾಂಧಿಯವರ ಕೊಲೆಯಾಗುತ್ತದೆ. ಸಂಘಪರಿವಾರದ ಪ್ರಭಾವ ದಿಂದ ಅವರು ಕಠಿಣಶಿಸ್ತುಗಾರರಾದರೋ, ಅವರ ಕಠಿಣಶಿಸ್ತೇ ಅವರನ್ನು ಸಂಘದತ್ತ ಆಕರ್ಷಿಸಿತೋ, ಅಂತೂ ಇಡೀ ಕುಟುಂಬ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪ್ರಭಾವದಲ್ಲಿತ್ತು. ಪೆಂಡಾರಕರರು ಸಂಘದ ಪೋಷಕರೂ ಸಕ್ರಿಯಕಾರ್ಯಕರ್ತರೂ ಉಗ್ರದೇಶಪ್ರೇಮಿಯೂ ಹಿಂದೂವಾದಿಯೂ ಆಗಿದ್ದರು. ನಿತ್ಯವೂ ಗಿಜುಗುಡುತ್ತಿದ್ದ ಅವರ ಸ್ಟುಡಿಯೋದಲ್ಲಿ ಧೂಮಪಾನವಿಲ್ಲ, ಕುಡಿತವಿಲ್ಲ, ಹಾದರವಿಲ್ಲ, ಜಗಳ ಗಲಾಟೆಗಳಿಲ್ಲ, ಸ್ವತಃ ತಮ್ಮ ತಾಯಿತಂದೆ ಜೋರಾಗಿ ಜಗಳವಾಡಿದ್ದನ್ನು ನಾನು ಕಂಡಿಲ್ಲವೆಂದು ಮಾಧವಿ ಬರೆಯುತ್ತಾರೆ. ಇಂತಹ ಪೆಂಡಾರಕರರ ಸ್ಟುಡಿಯೋ ಮತ್ತು ಮನೆ ಸಮಸ್ತ ವಸ್ತುಸಂಪತ್ತಿನೊಂದಿಗೆ ಗಾಂಧೀಜಿ ಯವರ ಕೊಲೆಯ ಹಿನ್ನೆಲೆಯಲ್ಲಿ ಜನರ ಆಕ್ರೋಶಕ್ಕೆ ಗುರಿಯಾಗಿ ಬೆಂಕಿಗೆ ಬಿದ್ದು ಸಂಪೂರ್ಣ ನಿರ್ನಾಮವಾಗುತ್ತೆ. ಅಕ್ಷರಶಃ ಪೆಂಡಾರಕರರ ಕುಟುಂಬ ಬೀದಿಗೆ ಬೀಳುತ್ತದೆ. ಪೆಂಡಾರಕರರ ಸೆರೆವಾಸ, ಅವರ ಮೂವರು ಪತ್ನಿಯರು ಸ್ಟುಡಿಯೋದ ಬೂದಿಗುಡ್ಡೆಯ ಮೇಲೆ ಶೆಡ್‌ಕಟ್ಟಿ ಕೊಂಡು ಮಕ್ಕಳನ್ನು ಸಲಹುವ, ಗಂಡನನ್ನು ಸೆರೆಯಿಂದ ಬಿಡಿಸಿಕೊಳ್ಳುವ, ಕೇಸಿನಿಂದ ಮುಕ್ತಿಗೊಂಡ ಪೆಂಡಾರಕರರು ಮತ್ತೆ ಅದೇ ಬೂದಿಯ ಮೇಲೆ ಸ್ಟುಡಿಯೋ ಕಟ್ಟುವ ವಿವರಗಳು ಒಂದು ಹುಡುಗಿಯ ಕಣ್ಣಲ್ಲಿ ಚಿತ್ರಿತಗೊಂಡು ರೂಢಿಗೆ ಬಿದ್ದಿಲ್ಲದ ಬಾಲ್ಯವೊಂದನ್ನು ಓದುಗ ಕಟ್ಟಿಕೊಳ್ಳಲು ನೆರವಾಗುತ್ತದೆ. ಗಾಂಧೀಜಿ ಹತ್ಯೆ ಮಾಡಿದ ಗೋಡ್ಸೆ ತಮ್ಮ ಕುಟುಂಬಕ್ಕೆ ಬಂದು ಹೋಗುತ್ತಿದ್ದ ಘಟನೆಯೊಂದನ್ನು ಯಥಾವತ್ ನೀಡುವ ಮಾಧವಿ ಮತ್ತು ಕುಟುಂಬದ ಇತರೆ ಹುಡುಗರಿಗೆ ಈ ಹತ್ಯೆಯ ಕಿಂಚಿತ್ ಗಾಂಭೀರ್ಯವೂ ಅರ್ಥವಾಗಿರಲಿಲ್ಲ ಎಂಬುದು ಆಶ್ಚರ್ಯವೇನಲ್ಲ. ಪೆಂಡಾರಕರರು ತಮ್ಮ ಹದ್ದುಗಣ್ಣಿನಡಿಯಲ್ಲಿ ಮಕ್ಕಳನ್ನು ಬೆಳಸಿದ್ದ ರೀತಿಯೇ ಹಾಗಿತ್ತು. ಗಾಂಧಿಯವರು ತುಂಬಾ ಒಳ್ಳೆಯವರು, ಗೋಡ್ಸೆ ಎಂತಹ ಒಳ್ಳೆಯ ಯುವಕ, ಇವನು ಅವರನ್ನೇಕೆ ಕೊಂದನೆಂದು ಮಕ್ಕಳು ಮಾತಾಡಿಕೊಳ್ಳುತ್ತಿದ್ದರಂತೆ.

ತಮ್ಮ ಶಾಲೆಯ ಬಿಡುವಿನಲ್ಲಿ ನೆಟ್ಟಗೆ ಸ್ಟುಡಿಯೋಕ್ಕೆ ಹೋಗಿ ಸಾಲದೆ ಬಂದ ಪಾತ್ರಗಳಿಗೆ ಮೇಕಪ್ ಹಾಕಿಕೊಂಡು ಹೇಳಿದಷ್ಟನ್ನು ಅಭಿನಯಿಸಿ ತೆಪ್ಪಗೆ ಮನೆಗೆ ಬರುತ್ತಿದ್ದ ಮಕ್ಕಳಿಗೆ ಸ್ಟುಡಿಯೋ ಎಂಬುದು ಶಾಲೆಯ ವಿಸ್ತರಣೆ ಅಷ್ಟೆ ಸ್ವತಃ ಮಾಧವಿ ಅತ್ಯುತ್ತಮ ಗಾಯಕಿಯಾಗಿದ್ದು ಬದುಕಿನುದ್ದಕ್ಕೂ ತಾವು ದೀದಿಯೆಂದು ಕರೆಯುತ್ತ ಬೆಂಬಲ ಪಡೆಯುತ್ತಿದ್ದ ಲತಾಮಂಗೇಶಕರರಿಂದಲೇ ಭೇಷ್‌ಗಿರಿ ಪಡೆದಿದ್ದರೂ ಅವರ ಈ ಗಾಯನ ಪ್ರತಿಭೆಯನ್ನು ಕಿಂಚಿತ್ತೂ ಪೋಷಿಸದ ಪೆಂಡಾರಕರರ ಶಿಸ್ತಿಗೆ ಏನೆನ್ನಬೇಕು? ತಮ್ಮ ಮಕ್ಕಳು ಸಿನಿಮಾದವರೆಂದು ಜನರಿಂದ ತುಚ್ಛೀಕರಣಕ್ಕೆ ಒಳಗಾಗಬಾರದೆಂದು ಅವರು ತೀರ್ಮಾನಿಸಿದಂತಿದೆ. ಆದರೆ ಏಳೆಂಟು ವರ್ಷ ಮಾತ್ರ ಈ ಥಳುಕಿನ ಲೋಕದಲ್ಲಿ ಇದ್ದೂ ಇಲ್ಲದಂತಿದ್ದು ಹದಿನೇಳಕ್ಕೆ ಮದುವೆಯಾಗಿ, ಹೆಚ್ಚು ಕಡಿಮೆ ತೌರಿನ ವಾತಾವರಣದಿಂದಲೇ ಸಂಪೂರ್ಣ ದೂರವಾಗಿಬಿಡುವ ಮಾಧವಿ ಯವರಿಗೆ ಸಿನಿಮಾದವಳು ಎಂಬ ಮೂದಲಿಕೆ ತಪ್ಪಲೇ ಇಲ್ಲ! ಪ್ರಸಿದ್ಧ ತಾಯಿತಂದೆಯರ ಮಕ್ಕಳು ಅನುಭವಿಸಬೇಕಾದ ಕಡ್ಡಾಯ ಶಿಕ್ಷೆ ಇದಾಗಿರಬಹುದೇ? ಆರಂಭದಲ್ಲಿ ಮಕ್ಕಳೊಂದಿಗೆ ಮಾತಾಡಲೂ ಬಿಡುವಿಲ್ಲದಿದ್ದ ಅಪ್ಪ ಅಮ್ಮನ ವೃತ್ತಿಯಿಂದಾಗಿ ಉಂಟಾದ ತೀವ್ರ ಏಕಾಂತ, ಮಲತಾಯಂದಿರ ಮಲಸೋದರ ಸೋದರಿಯರ ಪ್ರೀತಿ ಸುರಿಯುವ ಲೋಕಾಂತ, ಇಡೀ ಮಹಾರಾಷ್ಟ್ರದ ಸಕಲ ಪ್ರಜೆಯೂ ಗೌರವಿಸುವಂತಹ ಅಪ್ಪನಿಂದಾಗಿ ನಿತ್ಯ ಝುಮುಗುಟ್ಟುವ ಜನಸಂತೆ, ಅದೇ ಅಪ್ಪನ ಚಚ್ಚರದಿಂದ ಕವುಚಿಕೊಂಡ ಜನಸಂಪರ್ಕ ಕೊರತೆ, ಕೈಗೆಟುಕುವ ರಂಗಿನ ಲೋಕ, ಅದನ್ನು ಮುಟ್ಟೀಯೇ ಜೋಕೆ ಎಂದು ಜತನಮಾಡುವ ಕೌಟುಂಬಿಕ ಲೋಕ... ಆಹಾ, ಎಂತಹ ವಿರೋಧಾ ಭಾಸಗಳ ಕಂತೆ!

ಮನೆವಾರ್ತೆಗೆ, ವೃತ್ತಿ ಅಗತ್ಯಕ್ಕೆ, ಮತ್ತೊಂದಕ್ಕೆಂದು ಮೂವರು ಹೆಂಡತಿಯರನ್ನು ಕಟ್ಟಿಕೊಳ್ಳುವ ಗಂಡಸಿನ ವ್ಯಕ್ತಿತ್ವವನ್ನು ಅಂದೂ ಇಂದೂ ಉಚ್ಚಮಟ್ಟದಲ್ಲಿಯೇ ಇಡುವ ನಮ್ಮ ಸಮಾಜ ಅದೇ ಕಾರಣಕ್ಕೆ ಹೆಂಗಸು ಮೂರು ಪತಿದೇವರನ್ನು ಒಟ್ಟಿಗೆ ಕಟ್ಟಿಕೊಂಡರೆ ತಡೆದುಕೊಂಡೀತೇ? ತನ್ನ ಅಪ್ಪನಲ್ಲಿ ಗುರು ತಂದೆ ಎಲ್ಲವನ್ನೂ ಕಂಡೆ ಎಂದು ತನ್ಮಯತೆಯಿಂದ ಕೈ ಮುಗಿಯುವ ಲೇಖಕಿ ತಮ್ಮ ಬಾಲ್ಯಕ್ಕೆ ಬರೆದುಕೊಂಡ ಷರಾ :- ಸಾಮಾನ್ಯ ಮಕ್ಕಳಂತೆ ನಾನು ಬೆಳೆಯಲೇ ಇಲ್ಲ. ಹಿಂಸೆ ಅಹಿಂಸೆಗಳ ದ್ವಂದ್ವದಲ್ಲೇ ಇದ್ದು, ಇದರಿಂದಾಗಿಯೇ ಬದುಕಿನಲ್ಲಿ ಉದ್ದಕ್ಕೂ ಮೋಸಕ್ಕೊಳಗಾದೆ.

ಮಾಧವಿಯವರ ಎರಡನೇ ಹಂತದ ಬದುಕು ಆರಂಭವಾಗುವುದು, 17ರ ಪ್ರಾಯದಲ್ಲಿ ಗೋವೆಯ ಕಾಟಕರ ಕುಟುಂಬದ ನರೇಂದ್ರನೆಂಬ ಸ್ಫುರದ್ರೂಪಿ ತರುಣನೊಂದಿಗೆ ನಡೆಯುವ ವಿವಾಹದಿಂದ. ಈ

ಆತ್ಮಕಥೆಯ ಉತ್ತಮ ಭಾಗ ಇಲ್ಲಿದೆ. ಗೋವೆಯನ್ನು, ಗಂಡನನ್ನು ಮುಗ್ಧವಾಗಿ ಪ್ರೀತಿಸುವ ಲೇಖಕಿ ತನ್ನ ಸಾಂಸಾರಿಕ ವಿವರಗಳನ್ನು ಸ್ವಾನುಕಂಪದ ಬೇಡಿಕೆಯಿಲ್ಲದೆ ಭಾವುಕತೆಯ ಉದ್ಗಾರಗಳಿಲ್ಲದೆ ಮಂಡಿಸಿದ್ದಾರೆ. ಈ ವಿವರಗಳಂತು ಮತ್ತೂ ವಿಚಿತ್ರ. ಗೋವೆಯ ಬಾಂದೋಡದಲ್ಲಿದ್ದ ಕಾಟಕರ ಕುಟುಂಬದ ಒಡೆಯ ಅಂದರೆ ಮಾಧವಿಯವರ ಮಾವನಿಗೆ ಸ್ವಂತ ಉದ್ಯೋಗವೇನೂ ಇಲ್ಲ. ಮೊದಲ ಹೆಂಡತಿ ತೀರಿದ್ದಾಳೆ, ಎರಡನೆಯ ಹೆಂಡತಿಯ ಜೊತೆಗೆ ಒಂದು ರಖಾವೂ ಇದೆ. ಮೀನು ತರುವುದು, ಹೆಂಡತಿಗೆ ಅದರ ಭಕ್ಷ್ಯಗಳನ್ನಿಳಿಸಲು ಅಪ್ಪಣೆ ಕೊಡುವುದು, ಇಳಿಸಿದ್ದನ್ನು ನುಂಗುವುದು ಇಷ್ಟೆ ಮನೆಗಂಡಸರ ದೊಡ್ಡ ಕೆಲಸ. ಮನೆಯ ಮುಖ್ಯ ವಿಷಯ ಊಟ.

ಹಾಗಾದರೆ ಆಮದಾನಿ ಎಲ್ಲಿಂದ? ಮೂರುದಿನ ನಡೆದರೂ ಕೊನೆಗಾಣದ ದೊಡ್ಡ ತೋಟ ಗದ್ದೆಗಳ ಜಿರಾಯಿತಿಯಿಂದ. ಇದು ಬಂದದ್ದೆಲ್ಲಿಂದ? ಮಾವನವರ ತಂಗಿ ನಬೂಬಾಯಿ ದೇವದಾಸಿ ಪದ್ಧತಿಯಂತೆ ಮುಂಬಯಿಯ ಶಾಪುರಜಿ ಎಂಬ ಕುಬೇರ ಪಾರ್ಶಿಯೊಬ್ಬನ ರಖಾವಾಗಿ, ಪುಣ್ಯವಶಾತ್ ಆತ ಆಕೆಯನ್ನು ಮದುವೆಯೂ ಆಗಿ ಮಕ್ಕಳು ಆಗದೆಯಿದ್ದುದರಿಂದ. ಈ ಹೆಂಗಸು ತನ್ನ ತೌರು ಗೋವಾದ ಮೇಲಿನ ಪ್ರೀತಿಯಿಂದ ಅಣ್ಣನಿಗೆ ಆಸ್ತಿ ಮಾಡಿಕೊಟ್ಟಿದ್ದೂ ಅಲ್ಲದೆ ಅವನ ಹಿರಿಹೆಂಡತಿಯ ಮೂವರು ಗಂಡುಮಕ್ಕಳನ್ನು ದತ್ತಕ ಮಾಡಿಕೊಂಡು ಸೊಸೆಯಂದಿರನ್ನು ನಿಲುವು ಬಂಗಾರ, ನುಣುಪು ರೇಷಿಮೆಯಲ್ಲಿ ಮುಳುಗಿಸಿದ್ದಳು. ಹಾಗೆ ಮುಂಬಯಿಯ ಪಾರ್ಶಿ ಕುಬೇರನ ಅಲಿಶಾನ ಬಂಗಲೆಯಲ್ಲಿ ಸ್ಥಾಪಿತವಾದ ಮೂವರು ಸೊಸೆಯರಲ್ಲಿ ಮಾಧವಿ ನಡುವಿನವಳು. ಸುಲೋಚನಳೆಂಬ ಬಾಲ್ಯದ ಹೆಸರು ಕಳಕೊಂಡು ಮಾಧವಿ ಕಾಟಕರಳಾದದ್ದು ಇಲ್ಲಿಯೇ. ಈ ಪಾರ್ಶಿ ಶ್ರೀಮಂತನ ಮನೆಯ ಭೋಜನ ವೈಭವದ ವಿವರಗಳು ಬಾಯಲ್ಲಿ ನೀರೂರಿಸುತ್ತವೆ. ಬಿಟ್ಟಿಯಾಗಿ ಇಂಥ ವೈಭೋಗವನ್ನು ದಯಪಾಲಿಸಿದ್ದ ಅತ್ತೆ ಅಷ್ಟೇ ಬಿಟ್ಟಿಯಾಗಿ ಕುಕ್ಕು ಮಾತುಗಳನ್ನೂ ದಯಪಾಲಿಸುತ್ತಿದ್ದಳು. 'ಈ ಸಿನಿಮಾದವರನ್ನು ಸೊಸೆಯನ್ನಾಗಿ ತಂದು ನನಗೆ ಸಾಕಾಗಿದೆ ಇವರ ಮನೆಯಲ್ಲಿ ಒಗ್ಗರಣೆ ಹಾಕಿದರೂ ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ ಇವರ ಅಪ್ಪಂದಿರು ಮೂರ್‍ನಾಲ್ಕು ಮದುವೆ ಮಾಡಿಕೊಂಡರು.'



**ಕುಣಿಯೇ ಘುಮಾ**

ಲೇ. : ಮಾಧವಿ ದೇಸಾಯಿ

ಪ್ರ. : ನವಕರ್ನಾಟಕ ಪ್ರಕಾಶನ ಪ್ರೈ. ಲಿ., ಬೆಂಗಳೂರು.

ಮು : 1997 ಮತ್ತು 2008.

ಬೆಲೆ : ರೂ. 40/-

ಗತ್ತು ಹಾಗೂ ಔದಾರ್ಯಗಳ ಕಲಾಯಿಯಂತಿದ್ದ ಈ ಮುಂಬಯಿ ಅತ್ತೆಯ ಬಗ್ಗೆ ಗೌರವದಿಂದ ಬರೆಯುತ್ತ ಮಾಧವಿ ದೇವದಾಸಿ ಪದ್ಧತಿಯನ್ನು ಹೀಗೆ ವಿವರಿಸುತ್ತಾರೆ 'ತಂಗಿಯ ಬಲಿಪೀಠದ ಮೇಲೆ ಸಹೋದರ ಹಾಗೂ ಅವರ ಸಂಸಾರ ಬೆಳೆಯೋದು, ಮಕ್ಕಳು ಬೆಳೆಯೋದು, ಮನೆಯಲ್ಲಿ ಸೊಸೆಯರು ಬರೋದು, ಗರತಿತನ ಪಡೆಯೋದು, ಒಂದೊಂದು ಮನೆಯಡಿಯಲ್ಲೂ ಒಬ್ಬೊಬ್ಬ ಅಹಲ್ಯೆಯ ಶಿಲೆ'. ಈ ಗತ್ತಿನ ಅತ್ತೆಯ ಅಪಾರ ಶ್ರೀಮಂತಿಕೆಯನ್ನು ಹಾಯಾಗಿ ಸವಿಯುತ್ತಿದ್ದ ಮಾಧವಿ-ನರೇಂದ್ರ ದಂಪತಿಯನ್ನು ಅತ್ತೆ ಸೀದಾ ಎತ್ತಿ ಗೋವಾದ ಬಾಂದೋಡಕ್ಕೆ ಅಲ್ಲಿನ ಆಸ್ತಿಯ ಉಸ್ತುವಾರಿಗೆ ಎಸೆಯುತ್ತಾಳೆ. ಅಲ್ಲಿ ಈ ಮೊದಲೇ ಹೇಳಿದ ಕ್ರಿಯಾಶೂನ್ಯ ಮಾವ ಮೈದುನರು. ಈ ಎಳೆದಂಪತಿಯು ಅವರೊಂದಿಗೆ ಸೇರಿಕೊಂಡು ಉಣ್ಣುತ್ತ ಉಡುತ್ತ, ಗೋವೆಯ ಸಾಂಪ್ರದಾಯಿಕ ಹಬ್ಬ ಹರಿದಿನ ಜಾತ್ರೆ ತೇರುಗಳಲ್ಲಿ ತಿರುಗುತ್ತ, ಅತ್ತೆಯ ಆಸ್ತಿಯನ್ನು ಕರಗಿಸುತ್ತ ಇದ್ದುಬಿಟ್ಟರು. ಇಲ್ಲಿ ಮಾಧವಿ ನೀಡುವ ಗೋವೆಯ ನರಸತ್ತ ರಾಜಕೀಯ ಚಿತ್ರಣ ಕೊರೆದಂತಿದೆ. ಸ್ವಾತಂತ್ರ್ಯ ಭಾರತದಲ್ಲಿ ಲೀನಗೊಳ್ಳದೆ ಪೋರ್ಚುಗೀಸರ ವಶದಲ್ಲಿದ್ದ ಗೋವೆಯಲ್ಲಿ ಜನ ಎಲ್ಲಿಯವರೆಗೆ ತೆಂಗಿನಲ್ಲಿ ಫಲಬಿಡುತ್ತದೋ ಗದ್ದೆಯಲ್ಲಿ ತೆನೆ ಒಡೆಯುತ್ತದೋ ಅಲ್ಲಿಯ ತನಕ ಉಸಿರೆತ್ತದೆ ಇದ್ದರಂತೆ. ಪೋರ್ಚುಗೀಸ್ ಗಂಡು ಸ್ಥಳೀಯ ಕೊಂಕಣಿ ಹೆಣ್ಣಿಗೆ ಹುಟ್ಟಿದ ಮಿಸ್ತಿಸ್ ಎಂಬ ಮಿಶ್ರಜನಾಂಗದ ಯುವಕರು ಸೇನೆಯಲ್ಲಿದ್ದು ಗೋವಾ ಮುಕ್ತಿ ಹೋರಾಟಗಾರರಿಗೆ ಹಿಂಸೆ ಕೊಡುವುದರಲ್ಲಿ ಕುಪ್ರಸಿದ್ಧರಾಗಿದ್ದರು. ಇಂಥದ್ದೇ ಮಿಸ್ತಿಸ್ ಪೊಲೀಸ್ ಅಧಿಕಾರಿಯ ಕೈಗೆ ಸೆರೆ ಸಿಕ್ಕುವ ಮಾಧವಿಯನ್ನು ಆತ ಮೋಹಪರವಶನಾಗಿ ಕಾಡುವ ಪ್ರಣಯ ಪ್ರಸಂಗ ಸ್ವಾರಸ್ಯವಾಗಿದ್ದು ಯೂರೋಪಿಗೆ ಹೊರಟುಬಾ ಎಂದು ಅಂಗಲಾಚುವ ಈ ಅಧಿಕಾರಿಯನ್ನು 'ಒಮ್ಮೆ ಮಾತ್ರ ಸಂಧಿಸಬಹುದಾದ ಜೀವದ ಗೆಳೆಯ' ಎನ್ನುತ್ತಾರೆ ಮಾಧವಿ.

ಎಳೆಯ ಹೆಂಡತಿ ಸತ್ಯಾಗ್ರಹಕ್ಕೆ ತೆರಳಿ ಅಕಾರಾತ್ರಿಯಲ್ಲಿ ಹಿಂತಿರುಗಿದಾಗಲೂ ತಣ್ಣಗೆ ಪ್ರತಿಕ್ರಿಯಿಸುವ ನರೇಂದ್ರ ಆರಕ್ಕೇರದ ಮೂರಕ್ಕಿಳಿಯದ ವ್ಯಕ್ತಿ. ಮಾಧವಿಯೊಳಗಿದ್ದ ಬರೆಯುವ, ಹಾಡುವ, ಸಂಘಟಿಸುವ ಪ್ರತಿಭೆ ಮತ್ತು ಶಕ್ತಿಗಳು ನರೇಂದ್ರನ ಒಡನಾಟದಲ್ಲಿ ಪೂರ್ಣ ಪ್ರಮಾಣ ಎಂದೂ ಹೊಮ್ಮುವುದಿಲ್ಲ. ಸಂಕಟವೆಂದರೆ ತನ್ನೊಳಗಿರುವ ಈ ಶಕ್ತಿಯ ಅರಿವು ಮಾಧವಿಗೇ ಇರುವುದಿಲ್ಲ. 26 ವರ್ಷಗಳ ಸಂಸಾರ ಸದಾ ಅಸ್ತಿತ್ವದ ಉಳಿವಿಗಾಗಿ ಹೋರಾಡುವುದರಲ್ಲೇ ಕಳೆದುಹೋಗುತ್ತದೆ. ಗೋವೆಯ ಎಲ್ಲ ಆಸ್ತಿಗೂ ಈ ದಂಪತಿ ಉಯಿಲಿನ ಮೂಲಕ ಒಡೆಯರಾಗುವುದರಿಂದ ಮನೆಯಲ್ಲಿ ಅಸಹನೆ, ದ್ವೇಷಗಳು ಹೊತ್ತಿಕೊಳ್ಳುತ್ತವೆ. ಅತ್ತೆಯಿಂದ ಬಂದ ಆಸ್ತಿಯನ್ನು ಕೈಗೆ ತೆಗೆದುಕೊಳ್ಳುವ ಚಾಣಾಕ್ಷತೆ, ನಿಂತು ಹೋರಾಡುವ ಕ್ಷಮತೆ ಇಲ್ಲ. ಮೇಲಾಗಿ ಧರ್ಮಕರ್ಮ ಜಿಜ್ಞಾಸೆ, ಅತ್ತೆಮಾವನನ್ನು ಹೊರಹಾಕಿದರೆ ಪಾಪವಲ್ಲವೆ ಇತ್ಯಾದಿ. ಲಂಪಟ ಮಾವನನ್ನು ದೂರವಿಟ್ಟು ಗೋವೆಯ ಆಸ್ತಿಯ ಮೇಲೆ ಕೂತಿದ್ದರೆ ಬಹುಶಃ ಮಾಧವಿಯವರ ಬದುಕೇ ಬೇರೆಯಾಗುತ್ತಿತ್ತು. ಆದರೆ ಬಾಲ್ಯದಲ್ಲಿ ಬೆನ್ನಿಗೆ ಬಿದ್ದ ದ್ವಂದ್ವ ಅವರನ್ನು ಕೈಹಿಡಿದು ಹಿನ್ನಡೆಸಿತು! ಅಲ್ಲಿಂದ ಎರಡು ಹೆಣ್ಣುಮಕ್ಕಳ ಸಮೇತ ಮಹಾನಗರ ಮುಂಬಯಿಯ ಹೊಟ್ಟೆಗೆ ಸೇರಿ, ಒಂದೇ ಕೋಣೆ ಒಂದೇ ನಲ್ಲಿ ಒಂದೇ ಬಚ್ಚಲಿನ ಚಾಲಿನಲ್ಲಿ ವಾಸ. ಇಲ್ಲಿ ತಾನೂ ಒಂದು ಶಿಕ್ಷಕಿ ಕೆಲಸವನ್ನು ಹುಡುಕಿಕೊಂಡು, ಗಂಡ, ಮಕ್ಕಳು, ಶಾಲೆ, ಬಿ.ಎ., ಟ್ರೈನಿಂಗ್, ದುಡ್ಡು, ರೋಗ ಎಲ್ಲವನ್ನೂ ನಿಭಾಯಿಸುತ್ತ ಮಾಧವಿ ಎಂಬ ತರುಣಿ ಪ್ರೌಢೆಯಾಗುತ್ತಾಳೆ. 'ಗಳಿಸುವ ಮಹಿಳೆ ತಾನಾಗಿಯೇ ಅರ್ಥಾರ್ಜನೆಯ ಸಂಕೋಲೆಯನ್ನು ಧರಿಸುತ್ತಾಳೆ. ಆರಂಭದಲ್ಲಿ ಈ ಬಂಗಾರದ ಸಂಕೋಲೆ ಅಪೂರ್ವ. ಮಂಗಳಸೂತ್ರದ ಸಂಕೋಲೆಯ ಜೊತೆಗೆ ಇನ್ನೊಂದನ್ನು ಧರಿಸಿದ್ದು ಹುಚ್ಚಿಗೆ ಗೊತ್ತಾಗುವುದೇ ಇಲ್ಲ.'

ಸಣ್ಣ ಸಣ್ಣ ಲಗತ್ತುಗಳಲ್ಲಿ ಸುಖವನ್ನು ಕಂಡುಕೊಳ್ಳುತ್ತ ಹಳಿಯ ಮೇಲೆ ಬಂದ ಸಂಸಾರದ ರೈಲು ನರೇಂದ್ರನ ಹಠಾತ್ ಸಾವಿನಿಂದ ನಿಂತುಹೋಗುತ್ತದೆ. ಕಾಮಾಲೆ ರೋಗಕ್ಕೀಡಾಗಿದ್ದ ಗಂಡನನ್ನು ಉಳಿಸಿಕೊಳ್ಳಲು ಪರದಾಡುವ ಮಾಧವಿಯಂತಹ ಅನೇಕ ಗೃಹಿಣಿಯರನ್ನು

ಕಂಡೇ ಪುರಾಣಕಾರನು ಸತಿಸಾವಿತ್ರಿಯೆಂಬ ಪಾತ್ರವನ್ನು ಬೆಳೆಸಿರ ಬಹುದು. ಯಾವ ಪವಾಡವೂ ನಡೆಯದೆ ನರೇಂದ್ರನನ್ನು ಕಳೆದು ಕೊಂಡು ವಿಧವೆಯಾಗುವ ಮಾಧವಿ ಇದಕ್ಕಿಂತ ಸತಿಹೋಗುವುದು ಮೇಲೆಂದು ಹಲುಬುತ್ತಾರೆ. ದಿನಾ ಒಂದೊಂದು ಅಂಗ ಸುಡುವ ಬದಲು, ಚಿತೆಯಲ್ಲಿ ಮಹಾಸತಿಯೆಂಬ ಬಿರುದಾಂಕಿತರಾಗಿ ನೆಗೆದು ಬೀಳುವುದು ಎಷ್ಟೋ ಮೇಲು ಎಂದು ಯಾರಾದರೊಬ್ಬ ವಿಧವೆಗೆ ನಮ್ಮ ಸಮಾಜದಲ್ಲಿ ಯಾವ ಕಾಲದಲ್ಲೂ ಅನ್ನಿಸಬಹುದು. ಈ ಲೇಖನ ಬರೆಯುವಾಗಲೂ ನನಗೆ ಅದಕ್ಕೆ ಪರಿಹಾರವೇನೂ ಹೊಳೆಯುತ್ತಿಲ್ಲ. ಸಮಗ್ರ ದೃಷ್ಟಿಕೋನದ ಬದಲಾವಣೆ ಇತ್ಯಾದಿ ಪದಪುಂಜಗಳು ನೆಗ್ಗಿಹೋಗುತ್ತಿವೆ. ನಿರ್ಭಿಡೆಯ ಸಂಸ್ಕೃತಿಯತ್ತ ಹೊರಳುತ್ತಿರುವ ನಮ್ಮ ನಗರಗಳು ಈ ಪ್ರಶ್ನೆಗೆ ಸದ್ಯದ ಉತ್ತರಗಳಾಗಬಹುದು.

ಮಗಳ ಮದುವೆ, ಎಸ್ಟೇಟ್ ಡ್ಯೂಟಿ ಇತ್ಯಾದಿ ಹಣಕಾಸಿನ ಮುಗ್ಗಟ್ಟಿಗೆ ಸಿಲುಕುವ ಮಾಧವಿ ಗೋವೆಯ ತಮ್ಮ ಪಾಲಿನ ಆಸ್ತಿಯ ಕಡೆಗೆ ಗಮನವಿಡುತ್ತಾರೆ. ಆದರೆ ಯಾವುದನ್ನು ಸಮಾಳಿಸಲು ಸಾಧ್ಯ ವಾಗದೆ ಇವರು ಹೊರಬಂದಿದ್ದರೋ ಅಲ್ಲಿ ಹಿರಿಯ ಮೈದುನ ನೆಗಣ್ಣಿಯರು ಸ್ಥಾಪಿತವಾಗಿ ಆಸ್ತಿ ಸಂರಕ್ಷಣೆಯಲ್ಲಿ ಯಶಸ್ವಿಯಾಗಿದ್ದಾರೆ. ಬೇಕಾದರೆ ಮಕ್ಕಳೊಂದಿಗೆ ಇಲ್ಲಿ ಬಂದಿರು ನಾವು ಸಲಹುತ್ತೇವೆ ಹೊರತು ನಗದು ಹಣ ಕೊಡಲಾರೆವು ಎಂಬುದು ಅವರ ಹಠ. ಅವರೊಂದಿ ಗಿರಲು ಮಾಧವಿಗೆ ಸೇರದು. ಹೀಗಾಗಿ ಅಲ್ಲಿಯ ಆಸ್ತಿಯನ್ನು ನ್ಯಾಯ ಬದ್ಧವಾಗಿ ಪಡೆಯಲು ದಾರಿತೋರಿಸೆಂದು ಅವರು ವೃದ್ಧ ತಂದೆ ಪೆಂಡಾರಕರರನ್ನು ಮೊರೆಹೊಕ್ಕಾಗ, ಅವರು ತೋರಿಸಿದ ಮಾರ್ಗ ರಣಜಿತದೇಸಾಯಿ! ಇದು ಅವರ ಬದುಕಿನ ಮೂರನೆಯ ಹಂತದ ಹೆಬ್ಬಾಗಿಲು. ಇದರೊಳಗೆ ಹೊಗುವ ಮೊದಲು ಸತ್ತ ನರೇಂದ್ರರ ಕುರಿತು ಮಾಧವಿಯವರು ಉಪಸಂಹಾರವಾಗಿ ಆಡುವ ಮಾತುಗಳನ್ನು ಇಲ್ಲಿ ಕೊಡುತ್ತೇನೆ. 'ನನಗಾಗಿ ಅವರು ಏನು ಮಾಡಿಲ್ಲ? ನೌಕರಿ ಮಾಡಿದ್ದರು, ಅಲಿಶಾನ್ ಬಂಗಲೆ ತೊರೆದು ಬಂದಿದ್ದರು, ನನ್ನ ಅಪ್ಪ ಅಮ್ಮನನ್ನು ವಾತ್ಸಲ್ಯದಿಂದ ಕಾಣುತ್ತಿದ್ದರು, ಗೆಳೆಯರಿಗೆ ತಿನ್ನಿಸಿ ಉಣ್ಣಿಸಿದ್ದರು, ನನ್ನ ಹವ್ಯಾಸಕ್ಕೆ ಚ್ಯುತಿ ಬರದಂತೆ ನೋಡಿದರು, ಸಂಕೋಚದಲ್ಲೇ ಬದುಕಿದರು, ಪ್ರೇಮ ವ್ಯಕ್ತಪಡಿಸಲಿಲ್ಲ, ಆದರೆ ಪ್ರೇಮಿಸಿ ದರು, ಬೈಗುಳಿಲ್ಲ, ಜಗಳವೂ ಇಲ್ಲ.' ಇಂತಹ ಸರಳರೇಖೆಯಂತಹ ವ್ಯಕ್ತಿತ್ವಕ್ಕಿಂತ ಮಾಧವಿಯವರಿಗೆ ಅಗತ್ಯವಾಗಿದ್ದುದು ಬೇರೆಯೇ ಇತ್ತು.

ಹೀಗೆ ತನ್ನ ಗೋವಾ ಆಸ್ತಿಯ ಹಕ್ಕು ಸ್ಥಾಪಿಸಲು ಕಾನೂನು ಸಹಾಯ ಕೋರಿ ಮಾಧವಿಕಾಟಕರ ಎಂಬ ಮಧ್ಯವಯಸ್ಕ ವಿಧವೆ ಬೆಳಗಾವಿಯ ವಿಮಾನ ನಿಲ್ದಾಣದಲ್ಲಿ ಮೊದಲಬಾರಿಗೆ ರಣಜಿತ ದೇಸಾಯಿಯವರನ್ನು ಭೇಟಿಯಾಗುತ್ತಾರೆ. ಆ ವೇಳೆಗೆ ರಣಜಿತರು ಸುಪ್ರಸಿದ್ಧ ಸಾಹಿತಿ, ಪದ್ಮಶ್ರೀ ಸಮ್ಮಾನಿತ, ಬೆಳೆದ ಎರಡು ಹೆಣ್ಣುಮಕ್ಕಳ ತಂದೆ. 22 ವರ್ಷದಿಂದ ಮಾನಸಿಕ ಆಸ್ಪತ್ರೆಯಲ್ಲಿರುವ ಪತ್ನಿ, ಕೋವಾಡದ ರಾಜವಾಡೆಯ ಇನಾಮ್ದಾರ, ಒಂಟಿತನದ ಹೆಸರಿನಲ್ಲಿ ಮೇಲೆಳೆದುಕೊಂಡಿದ್ದ ಕುಡಿತ. ಮೊದಲ ಭೇಟಿಯಲ್ಲಿಯೇ ಮಾಧವಿ ಯವರೆಡೆಗೆ ಆಕರ್ಷಿತರಾದ ರಣಜಿತರು ನಂತರ ಪ್ರೇಮಪತ್ರಗಳ ಮಳೆ ಸುರಿಸಿ ಭಾಲಜಿಯವರ ಅರ್ಜೆಂಟ್ ಒಪ್ಪಿಗೆ ಪಡೆದು ಮಾಧವಿ ಯವರನ್ನು ವೈದಿಕ ರೀತಿಯಲ್ಲಿ ವಿವಾಹವಾಗುತ್ತಾರೆ. ಈ ವಿವಾಹಕ್ಕೆ ಎರಡೂ ಕಡೆಯ ಹೆಣ್ಣುಮಕ್ಕಳ ಕಿಂಚಿತ್ ಸಮ್ಮತಿಯಿಲ್ಲ. ಲೀಲಾಬಾಯಿ ಯವರ ವಿರೋಧ, ವಾಡೆಯ ಉದಾಸೀನ ಈ ಎಲ್ಲದರ ನಡುವೆ ಮಾಧವಿ ಯಾಕಾಗಿ ಈ ಬಂಧನಕ್ಕೊಳಗಾದರು? ಇದಕ್ಕೆ ಸಮರ್ಥನೆ ಕೊಡುವ ಬದಲು ಲೇಖಕಿ ತಾವೇ ಇಂತಹ ಪ್ರಶ್ನೆಗಳನ್ನು ಹಾಕಿಕೊಳ್ಳು ತ್ತಾರೆ. ಈ ಹಂತದ ವಿವರಗಳನ್ನು ಕಟ್ಟಿಕೊಡುವಾಗ ಉದ್ಧಕ್ಕೂ ಉದ್ಗಾರಗಳ ಸುರಿಮಳೆ, ಆತ್ಮಭರ್ತ್ಸನೆಯ ಭಾವುಕತೆ, ಆತ್ಮಾನುಕಂಪಗಳು ಕಾಡಿವೆ.

ರಣಜಿತರೊಂದಿಗಿನ ಸಂಸಾರ ಮಾಧವಿಯವರಿಗೆ ಅವರು ಕಂಡಿರದಿದ್ದ, ಆದರೆ ಸುಪ್ತದಲ್ಲಿ ಕಾಣಲು ಬಯಸಿದ್ದ ಯಶಸ್ವಿ ಲೌಕಿಕ ಜೀವನವನ್ನು ಕೊಟ್ಟಿತು. ಮರಾಠೀ ಸಾಹಿತ್ಯಿಕ ಸಾಂಸ್ಕೃತಿಕ ಬದುಕಿನ ದಿಗ್ಗಜಗಳೊಂದಿಗೆ ಸಮಸಮದ ಒಡನಾಟ, ರಾಜಕೀಯವಾಗಿ ಸಾಮಾಜಿಕವಾಗಿ ವಿಸ್ತರಿಸಿದ ಪ್ರತಿಷ್ಠೆ, ಸಭೆ ಸಮಾರಂಭ, ಭಾಷಣ, ಮಾನಸನ್ಮಾನ, ಲೇಖಕಿಯೆಂಬ ಅಸ್ಮಿತೆ, ದೊಡ್ಡವಾಡೆಯ ಮಾಲೀಕಳ ಅಂತಸ್ತು ಶ್ರೀಮಂತಿಕೆಯ ಲೋಲುಪ್ತತೆ, ಪ್ರಸಿದ್ಧಪುರುಷನ ಪ್ರೇಮ ಎಲ್ಲವೂ ದೊರೆಯಿತು. ದೇಶವಿದೇಶಗಳನ್ನು ದರ್ಶಿಸಿ ಬಂದರು. ರವಿವರ್ಮ ಕಾದಂಬರಿ ರಚನೆಯಲ್ಲಿ ಒತ್ತಾಸೆಯಾದರು. ಹೆಣ್ಣುಮಕ್ಕಳ ಭಾರೀ ಮದುವೆಗಳು, ಲೆಕ್ಕವಿಲ್ಲದಷ್ಟು ಪಾರ್ಟಿಗಳು, ಮಾನ್ಯ ಅತಿಮಾನ್ಯ ಅತಿಥಿಗಳು ಎಲ್ಲವನ್ನೂ ಸಂಭಾಳಿಸುತ್ತ ಹಳೆಯಕಾಲದ ವಾಡೆಯನ್ನು

> ***ಕುಣಿಯೇ ಘುಮಾ***
>
> *ಮಹಾರಾಷ್ಟ್ರದ ಒಂದು ಪಾರಂಪರಿಕ ನೃತ್ಯ. ಮದುವೆಯ ನಂತರ ನಡೆಯುವ ಒಂದು ಆಚರಣೆ. ಮಂಗಳಗೌರಿಯನ್ನು ಪೂಜಿಸಿದ ಸುಮಂಗಲಿಯರು ವೃತ್ತಾಕಾರವಾಗಿ ನಿಲ್ಲುತ್ತಾರೆ. ಇವರ ನಡುವೆ ವೃತ್ತದ ಒಳಗೆ ಒಬ್ಬಾಕೆ ಇರುತ್ತಾಳೆ, ಅವಳೇ 'ಘುಮಾ'. ವೃತ್ತಾಕಾರದಲ್ಲಿರುವ ಸ್ತ್ರೀಯರು ತಾಳ ಹಾಕುತ್ತ ಆಕೆಯನ್ನು ಕುಣಿಯಲು ಒತ್ತಾಯಿಸುತ್ತಾರೆ. ಆಕೆ ತಾಳ ತಪ್ಪಿಸಿದರೂ ಬಿಡದೆ ಒತ್ತಾಯಮಾಡಿ ಕುಣಿಸುತ್ತಾರೆ. ಆಗ ಅವರು ಹಾಡುವ ಹಾಡು ಗುಂಪು ಮತ್ತು ಆಕೆಯ ನಡುವಿನ ಸಂಭಾಷಣೆಯಂತಿದೆ. ಕುಣಿಯುವಾಗ ಆಕೆ ವೃತ್ತದಿಂದ ದೂರ ಸರಿದರೆ ಔಟ್ ಆಗುತ್ತಾಳೆ. ಮತ್ತೆ ವೃತ್ತಕ್ಕೆ ಪ್ರವೇಶವಿಲ್ಲ. ಇದೊಂದು ಸಾಂಕೇತಿಕ ಆಟ-ನೃತ್ಯ. ವೃತ್ತಾಕಾರದಲ್ಲಿ ನಿಂತ ಗೃಹಿಣಿಯರು ರೂಢಿ, ಪರಂಪರೆ, ಸಂಸ್ಕೃತಿ, ಶೀಲ, ಮನೆಯ ಹೊಸ್ತಿಲು-ಮರ್ಯಾದೆಯ ಸಂಕೇತಗಳು, ನಡುವೆ ಇರುವ ಘುಮಾ ಈ ಸಂಕೋಲೆ ಮುರಿದು ಹೊರಬರಕೂಡದು. ಈ ವೃತ್ತದಿಂದ ಹೊರಬರುವುದೇ ಅವಳಿಗೆ ಬಿಡುಗಡೆ. ಆದರೆ ವೃತ್ತದ ಹೊರಗೂ ಒಂದು ವೃತ್ತವಿದೆ, ಅದು ಸಮಾಜ. ಹೊರಬಂದ ಹೆಣ್ಣಿಗೆ ಇದೂ ತಡೆದುಕೊಳ್ಳಲಾಗದ ಹೊರೆಯೇ ಆಗುತ್ತದೆ. ಸಾಮಾನ್ಯವಾಗಿ ಸ್ತ್ರೀಯರಿಗೆ ಆ ವೃತ್ತದಿಂದ ಹೊರಬಂದು ಔಟ್ ಆಗುವುದೂ ಇಷ್ಟವಿಲ್ಲ; ಬೇರೆಯವರ ತಾಳಕ್ಕೆ ಕುಣಿಯುವ ಮನಸ್ಸೂ ಇಲ್ಲ. ವೃತ್ತದಿಂದ ಹೊರಬರುವುದೇ ಮುಕ್ತಿ, ಆದರೆ ಅದಕ್ಕೆ ಸಹಕಾರ ಇಲ್ಲ. ವೃತ್ತದೊಳಗಿನ ಘುಮಾ ಆಗುಳಿಯದೆ, ವೃತ್ತ ಸೀಳಿ ಹೊರಬಂದು ತನ್ನದೇ ಆದ ಅಸ್ತಿತ್ವ, ಮನಸ್ಸು, ವ್ಯಕ್ತಿತ್ವ ಗಳಿಸಿಕೊಳ್ಳಬಯಸುವ ಹೆಣ್ಣಿನ ಬದುಕು ಇಲ್ಲಿದೆ.*

ಪ್ರೀತಿಸುತ್ತ ಸಿಂಗರಿಸುತ್ತ ಬಗೆಬಗೆಯಾಗಿ ಸಂಸಾರವನ್ನು ತಬ್ಬಿಕೊಳ್ಳುವ ಮಾಧವಿಯವರನ್ನು 16 ವರ್ಷಗಳ ಸಂಸಾರದ ಬಳಿಕ ದೇಸಾಯರು ವಿಚ್ಛೇದನ ಕೇಳುತ್ತಾರೆ. ಈ ಪ್ರಮುಖ ತಿರುವಿಗೆ ನಿಶ್ಚಿತ ಕಾರಣಗಳನ್ನು ಲೇಖಕಿ ಕೊಡುವುದೇ ಇಲ್ಲ. ತಾರ್ಕಿಕವಾಗಿ ತಮ್ಮನ್ನು ಸಮರ್ಥಿಸಿ ಕೊಳ್ಳುವುದೂ ಇಲ್ಲ. ಈ ಸಾಲುಗಳ ನಡುವೆಯೇ ಗ್ರಹಿಸಬಹುದಾದ ಕಾರಣಗಳು ಇವು. ಒಂದು, ರಣಜಿತರ ಮಾನಸಿಕ ವಿಕ್ಷಿಪ್ತತೆ. ಇನಾಂದಾರಿಕೆಯ ದರ್ಪವನ್ನು ರಕ್ತದಲ್ಲಿ ಕರಗಿಸಿಕೊಂಡಿರುವ ಸ್ವಕೇಂದ್ರಿತ ಮನಸ್ಸಿನ ದೇಸಾಯಿಯವರಿಗೆ ಕಾದಂಬರಿಗಳಲ್ಲಿ ಮಾತ್ರ ಹೆಣ್ಣುಗಳನ್ನು ಗೌರವಿಸಿ ಗೊತ್ತಿದ್ದುದು. ಅಂತಹ ಹೇಳಿಕೊಳ್ಳುವ ಕಾರಣವಿಲ್ಲದೇ ಮೊದಲ ಪತ್ನಿಯನ್ನು ಆಸ್ಪತ್ರೆಗೆ ಅಟ್ಟಿದ್ದ ಲೇಖಕನಿಗೆ 22 ವರ್ಷಗಳ ಅನಿಯಮಿತ ಬದುಕು ಮೈಯುಂಡು ಹೋಗಿತ್ತು. ತಾವು ಬಯಸಿ ವಿವಾಹವಾದ ಮಾಧವಿಯು ಸದಾ ತಮ್ಮನ್ನು ಭೋಪರಾಕು ಮಾಡುತ್ತ ತಮ್ಮ ಗುರುತ್ವಾಕರ್ಷಣೆಯಲ್ಲೇ ಸುತ್ತುತ್ತ ಇರುವಳೆಂದು ನಿರೀಕ್ಷಿಸಿದ್ದ ರೇನೋ. ಆದರೆ ಮಾಧವಿಯೆಂಬ ಹೆಣ್ಣು ತನ್ನನ್ನು ಲಾಲಿಸುತ್ತ ಕೂಡದೆ ಎಲ್ಲ ಕ್ಷೇತ್ರಗಳಲ್ಲೂ ತಮ್ಮನ್ನು ಮೀರಿ ಬೆಳೆಯುವ ಪರಿ, ಗಳಿಸಿಕೊಳ್ಳುತ್ತಿರುವ ಮನ್ನಣೆ ಅವರಿಗೆ ಅಸಹನೆ ತಂದಿತ್ತು. ಹೀಗಾಗಿಯೇ ಅವರು ಮಾಧವಿಯವರನ್ನು ಉದ್ದೇಶಪೂರ್ವಕವಾಗಿ ದೂರ ಸರಿಸಲಾರಂಭಿಸಿದರು. ಅಂಕೆಯಿಲ್ಲದ ಕುಡಿತ, ಹೇಳದೇ ಕೇಳದೆ ಹೊರಸಂಚಾರ, ಕಾರಣವಿಲ್ಲದ ಅಳು ಹೆಚ್ಚಾದವು.

ಎರಡನೆಯದು ಮತ್ತು ಮುಖ್ಯವಾದ ಕಾರಣ ವಾಡೆಯ ಆಸ್ತಿ. ದೇಸಾಯರ ಇಬ್ಬರು ಹೆಣ್ಣುಮಕ್ಕಳು, ಅಳಿಯಂದಿರಿಗೆ ಮಾಧವಿಯವರು ವಾಡೆಯ ಅಪಾರ ಆಸ್ತಿಯನ್ನು ದೋಚಲು ಬಂದ ರಕ್ಕಸಿಯೆಂಬಂತೆ ಕಾಣುತ್ತಿದ್ದರು. ವಾಡೆಯ ಇತರ ಬಂಧುಬಳಗ ಪೂರ್ತಿ ಮಾಧವಿಗೆ ವಿರೋಧವಾಗೇ ಇದ್ದು ಅವರ ಜಾತಿ, ಸಿನಿಮಾ ಹಿನ್ನೆಲೆ, ಮರುಮದುವೆಗಳನ್ನು ಮುಂದುಮಾಡಿ ಉದ್ದಕ್ಕೂ ಹೊರಗಿನವರಂತೆ ಕಂಡರು. ಕ್ರಮಕ್ರಮವಾಗಿ ದೇಸಾಯಿಯವರನ್ನು ವಿಚ್ಛೇದನಕ್ಕೆ ಪ್ರಚೋದಿಸಿ ಸಮಸ್ತ ವಾರಸುದಾರಿಕೆಯನ್ನು ತಮ್ಮ ಕಡೆಗೆ ಮಾಡಿಕೊಳ್ಳುವಲ್ಲಿ ಈ ಕೂಟ ಯಶಸ್ವಿಯಾಯಿತು.

ಕೊನೆಯದಾಗಿ ಮಾಧವಿಯವರ ಮಹತ್ವಾಕಾಂಕ್ಷೆಯೂ ಅವರಿಗೆ ಮುಳುವಾಗಿರಬಹುದು. ಹೊಸ ಪರಿಸರದ ಆಳ ಅರಿವಿಲ್ಲದೆ ಕೋವಾಡದ ವಾಡೆಯ ರೀತಿರಿವಾಜುಗಳನ್ನು ಬದಲಾಯಿಸುವ ಉತ್ಸಾಹ, ಬಾಲವಾಡಿ, ಯುವಮಂಡಳ, ಶಾಲೆ, ರಸ್ತೆ, ರಣಜಿತನಗರ ಇತ್ಯಾದಿ ಹಠಾತ್ ಬೆಳವಣಿಗೆಗಳು ಅವರಿಗೆ ತಿರುಗೇಟು ಕೊಟ್ಟವು. ಈ ಎಲ್ಲವನ್ನು ಜನ ವಾಡೆಯ ಮೇಲಿನ, ದೇಸಾಯಿಯವರ ಮೇಲಿನ ಹಕ್ಕುಸ್ಥಾಪನೆ ಪ್ರಯತ್ನಗಳೆಂದೇ ಭಾವಿಸಿತು. ಈ ಎಲ್ಲದರ ಪರಿಣಾಮವಾಗಿ ಮಾಧವಿಯೊಂದಿಗೆ ನಾನು ಬದುಕಲಾರೆ ಎಂದು ಹಠಹಿಡಿದು ಅದೇ ಭಾಲಜಿಯವರ ಮೂಲಕ ಒತ್ತಡ ತಂದು ದೇಸಾಯಿಯವರು ವಿಚ್ಛೇದನ ಪಡೆದರು. ಇಲ್ಲಿಯವರೆಗೆ ಸೀಮಿತವಲಯದೊಳಗೆ ಕುಣಿಯುತ್ತಿದ್ದ ಘುಮಾ, ಕುಣಿತ ನಿಲ್ಲಿಸಿ ಕೊನೆಗೂ ಹೊರಬಂದಳು. ತಾತ್ಪರ್ಯವಾಗಿ ಹೇಳಬಹುದಾದ ಮಾತುಗಳೆಂದರೆ ತಮ್ಮ ಸಮಸಮಕ್ಕೆ ಬೆಳೆಯುವ ಯಾವ ಹೆಣ್ಣನ್ನೂ ಗಂಡು ಸಹಿಸದು. ಗಂಡಿನ ಘನತೆಗೆ ಕುಂದುಬರಬಾರದೆಂದೇ ಹತ್ತಿಕ್ಕಿರುವ ಸ್ತ್ರೀಸತ್ವ ಈ ಸಾಂಪ್ರದಾಯಿಕ ಮಾನಸಿಕಸ್ಥಿತಿಕೋಶವನ್ನು ಒಡೆದು ಹೊರಬರಬೇಕು ಅನ್ಯಥಾ ಯಾವ ಅಡ್ಡಮಾರ್ಗವೂ ಇಲ್ಲ.

ವಿಚ್ಛೇದನದ ನಂತರ ಹೆಚ್ಚು ಕಡಿಮೆ ಬದುಕಿನ ಎಲ್ಲ ಹಂತಗಳಲ್ಲಿ ಗಳಿಸಿಕೊಂಡಿದ್ದ ಸಂಬಂಧಗಳು ಕಳಚಿ, ಒಬ್ಬಂಟಿ ಮಾಧವಿ ಮಕ್ಕಳ ವಿದ್ಯಾಭ್ಯಾಸಕ್ಕಾಗಿಯೆಂದು ಹಿಡಿದಿದ್ದ ಬೆಳಗಾವಿಯ ಬಾಡಿಗೆ ಮನೆಗೆ ಹಿಂತಿರುಗುತ್ತಾರೆ. ಆಮೇಲೆ ಕೋರ್ಟಿನ ಮೂಲಕ ಪಡೆದಿದ್ದ ಗೋವೆಯ ಹಳೆಯ ಮನೆಗೆ ಸೇರುತ್ತಾರೆ. ಈ ಆಸ್ತಿ ಹಂಚಿಕೆಯಲ್ಲಿಯೂ ಅದೇ ಧರ್ಮಕರ್ಮಗಳ ಜಿಜ್ಞಾಸೆಯಿಂದ ಗೋವೆಯ ದೊಡ್ಡ ಬಂಗಲೆಯನ್ನು ಲಾಯರ ಸಲಹೆಯ ಹೊರತಾಗಿಯೂ ತಮ್ಮ ನೆಗಣ್ಣಿಗೆ ಬಿಟ್ಟುಕೊಟ್ಟು ಹಳೆಯಮನೆಗೆ ಒಪ್ಪಿಕೊಳ್ಳುತ್ತಾರೆ. ಕೊನೆಗೂ ರಖಾವಾಗಿದ್ದ ನಬೂಬಾಯಿಯ ಅಹಲ್ಯೆ ಶಿಲೆ ಹುಗಿದು ಬೆಳೆಸಿದ ಆಸ್ತಿಯೇ ಮಾಧವಿಯವರ ಕೊನೆಗಾಲಕ್ಕೆ ಇಂಬಾಯಿತು. ಇದನ್ನು ಏನೆಂದು ಕರೆಯಬೇಕು?

ಮಾಧವಿಯವರು ಮೂಲತಃ ಪ್ರಪಂಚದ ಎಲ್ಲ ಹೆಂಗಸರ ಹಾಗೆ ಮನೆ, ಗಂಡ, ಮಕ್ಕಳನ್ನು ಬಯಸುವ ಗೃಹಿಣಿ ಮನೋಧರ್ಮದವರು. ಹೆಂಗಸಿನಲ್ಲಿ ಈ ಗುಣವನ್ನು ಪ್ರಕೃತಿ ತನ್ನ ಕಾರ್ಯಸಿದ್ಧಿಗಾಗಿಯೇ ಇಟ್ಟಿರುತ್ತದೆ. ಬುದ್ಧಿವಂತರೆಂದು ನಂಬಿಕೊಂಡುಬಿಟ್ಟಿರುವ ಮನುಷ್ಯರ ಬಗ್ಗೆ ಪ್ರಕೃತಿಗೇನೂ ಅಂತಹ ನಂಬಿಕೆಯಿಲ್ಲ. ವಿಕಾಸದ ಹಾದಿಯಲ್ಲಿ ಮನುಷ್ಯನ ಉಗಮದವರೆಗೆ ನಡೆಸಿರುವ ಲೆಕ್ಕವಿಲ್ಲದಷ್ಟು ಪ್ರಯೋಗಗಳು ಖಂಡಿತವಾಗಿಯೂ ನಿಂತಿಲ್ಲ. ಇನ್ನೂ ಇನ್ನೂ ಉತ್ತಮಿಕೆಯ ಕಡೆಗೆ ಪ್ರಕೃತಿ ನಡೆಯುತ್ತಲೇ ಇದೆ. ಹೀಗೆ ನಡೆಯುವಾಗ ಸೃಷ್ಟಿಯಾಗಿರುವ ಎಲ್ಲ ಜೀವವೈವಿಧ್ಯಗಳನ್ನೂ ಉಳಿಸಿಕೊಳ್ಳುವುದು ಅದರ ಮುಖ್ಯ ಗುರಿ. ಹೀಗಾಗಿಯೂ ಸಕಲ ಜೈವಿಕ ರಾಶಿಯಲ್ಲೂ ಗಂಡುಹೆಣ್ಣೆಂಬ ಭೇದ ಕಲ್ಪಿಸಿ ಸಂತಾನಾಭಿವೃದ್ಧಿಯನ್ನು ನಡೆಯಿಸುತ್ತಿರುತ್ತದೆ. ಇದಲ್ಲದೆ ಈ ಲಿಂಗಭೇದಕ್ಕೆ ಪ್ರಕೃತಿಯಲ್ಲಿ ಬೇರಾವ 'ಪರ್ಪಸ್' ಇಲ್ಲವೇ ಇಲ್ಲ. ಲಾಲನೆ ಪಾಲನೆಗಾಗಿ ಪ್ರಕೃತಿ ಹೆಣ್ಣನ್ನು ಆರಿಸಿಕೊಂಡಿದೆ ಅಷ್ಟೆ. ಇದನ್ನು ಅಂದರೆ, ಈ ಸಹಜ ನಿಯಮವನ್ನು ಎಲ್ಲ ಜೀವರಾಶಿಗಳು ತೆಪ್ಪಗೆ ಒಪ್ಪಿವೆ. ಆದರೆ ಮನುಕುಲ ಮಾತ್ರ ಈ ಮುಖ್ಯ ಉದ್ದೇಶವನ್ನೂ ಸೇರಿಸಿಕೊಂಡು ಲಿಂಗಭೇದಕ್ಕೆ ಏನೇನು ಕೆಟ್ಟ ಆವೃತ್ತಿ ತೊಡಿಸಬಹುದೋ ಅಷ್ಟನ್ನೂ ತೊಡಿಸಿದೆ. ಅದರ ಫಲವುಣ್ಣುತ್ತಿರುವುದು ಮಾಧವಿಯವರಂತಹ ಕೋಟ್ಯಂತರ ಮಹಿಳೆಯರು.

ಇದೇ ಕಾಲಕ್ಕೆ ಮಾಧವಿಯವರ ಹಿರಿಯ ಹೆಣ್ಣುಮಕ್ಕಳಿಬ್ಬರು ತಮ್ಮ ವಿವಾಹವನ್ನು ಮುರಿದು ಸ್ವತಂತ್ರವಾಗಿ ಜೀವಿಸತೊಡಗುತ್ತಾರೆ. ತಾನೇನು ತಪ್ಪುಮಾಡಿದೆ, ತನಗೇಕೆ ವಿಚ್ಛೇದನದ ಶಿಕ್ಷೆ ಎಂದು ಗೋಳಾಡುವ, ಕೋರ್ಟಿನ ಆವರಣದಲ್ಲಿ ದೇಸಾಯರ ಕಾಲು ಹಿಡಿದು ದಾದಾ ನನ್ನನ್ನು ದೂರಮಾಡಬೇಡಿ ಎಂದು ಅಂಗಲಾಚುವ ಮಾಧವಿಯವರಿಗಿಂತ ಇವರು ಭಿನ್ನರು. ಒಂದುವೇಳೆ ಮಾಧವಿ ವಾಡೆಯಲ್ಲೇ ಇದ್ದಿದ್ದರೆ ರಣಜಿತರ ಹಿರಿಯ ಹೆಂಡತಿಯ ಹಾಗೆ ಹುಚ್ಚಾಸ್ಪತ್ರೆಗೆ ಸೇರಬೇಕಾಗುತ್ತಿತ್ತೇನೋ. ಮಾಧವಿಯವರೇನೋ ಇಪ್ಪತ್ತೆರಡುವರ್ಷ ರೋಗಿಯಾಗಿದ್ದ ಆಕೆಯ ಆಸ್ಪತ್ರೆ ಬಿಲ್ಲುಗಳನ್ನು ತುಂಬಿ, ಅವಶ್ಯಕತೆಗಳನ್ನು ಪೂರೈಸಿ, ಪ್ರೀತಿ ಧೈರ್ಯಗಳನ್ನು ಕೊಟ್ಟು, ಆಕೆಗೆ ಹತ್ತಿದ್ದ ಹುಚ್ಚಿಯೆಂಬ ಬಿರುದನ್ನು ಕಳೆದು ಗೌರವಯುತ ಬದುಕಿಗೆ ತರುತ್ತಾರೆ. ಮಾಧವಿಯವರೇ ಅಲ್ಲಿಗೆ ತಳ್ಳಲ್ಪಟ್ಟಿದ್ದರೆ ಅವರನ್ನು ಹೊರತರುತ್ತಿದ್ದವರು ಯಾರು? ದೇಸಾಯರಂತೂ ಅಲ್ಲವಲ್ಲ.

ಇಷ್ಟಾದರೂ ಕೊನೆಗೆ ಉಳಿಯುವ ಪ್ರಶ್ನೆ ಹೀಗೆ ನಮ್ಮ ಹೆಣ್ಣುಮಕ್ಕಳು ವಿಚ್ಛೇದಿತಗೊಂಡು ತಾವೇ ಕಟ್ಟಿದ ಸಂಸಾರಗಳನ್ನು ಪರರಿಗೊಪ್ಪಿಸಿ ಸ್ವತಂತ್ರ ಎಂಬ ದೊಡ್ಡ ನಾಮಧೇಯದಡಿ ಬದುಕಬೇಕೇ ಅಥವಾ ಅಲ್ಲಿಯೇ ಇದ್ದು ಎದುರಿಸಬೇಕೆ? ಲೀಲಾರವರ ಸಿನಿಮಾ ಬದುಕಿನ ಕರಿನೆರಳು ಮಾಧವಿಯವರನ್ನೂ, ಮಾಧವಿಯವರ ಎರಡನೆಯ ವಿವಾಹದ ಅಭದ್ರ ಬದುಕಿನ ಕರಿನೆರಳು ಅವರ ಮೂವರು ಹೆಣ್ಣುಮಕ್ಕಳನ್ನೂ ಕಬಳಿಸಿದ್ದು ಸುಳ್ಳಲ್ಲ. ಈ ಪುಸ್ತಕವನ್ನು ದೇಸಾಯರಿಂದ ಎಂದೂ ತಂದೆಯ ಪ್ರೀತಿ ಮತ್ತು ಅಭಯಗಳನ್ನು ಹೊಂದದೇ ಹೋದ ತಮ್ಮ ಹೆಣ್ಣುಮಕ್ಕಳಿಗೆ ಮಾಧವಿ ಅಂಕಿತ ಮಾಡಿದ್ದಾರೆ. ❑





# ನಿಸರ್ಗದಲ್ಲಿ ನಿಸರ್ಗ: ಸಿ. ಆರ್. ಮಂಜುಳ

● ಪ್ರೊ|| ಎಂ.ಎಚ್. ಕೃಷ್ಣಯ್ಯ

ಅಲ್ಪ ಕಾಲಾವಧಿಯಲ್ಲಿಯೆ ಸಿ. ಆರ್. ಮಂಜುಳ ಅವರು ತಮ್ಮ ಕಲಾರಚನೆಗಳಲ್ಲಿ ತೋರಿದ ಬೆಳವಣಿಗೆ, ವಿವಿಧ ಮಾಧ್ಯಮಗಳು ಹಾಗೂ ಅವುಗಳ ನಿರ್ವಹಣೆಯಲ್ಲಿ ಸಾಧಿಸಿರುವ ನಿಯಂತ್ರಣ, ಕನಸು ಕಲ್ಪನೆ ಚಿಂತನೆಗಳನ್ನು ನಿರ್ಭಿಡೆಯಿಂದ ಅಭಿವ್ಯಕ್ತಿಸುವಲ್ಲಿ ತೋರಿರುವ ಧೈರ್ಯ ಆಶ್ಚರ್ಯ ಉಂಟುಮಾಡುತ್ತವೆ. ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ಕಲೆಯ ಡಿಪ್ಲೋಮಾ ಮುಗಿಸಿ, ಅಲ್ಲೆ ಕಲಾ ಅಧ್ಯಾಪಕಿಯಾದವರು. ಮಾತು ಕಡಿಮೆ, ಸೌಮ್ಯ ಸ್ವಭಾವ. ಹಲವು ಬಗೆಯ ಮಾಧ್ಯಮಗಳಲ್ಲಿ ಮಾದರಿ ರಚನೆಗಳ ಮೂಲಕವೆ ತಂತ್ರ, ಕೌಶಲ ಒಂದೊಂದರ ವಿಶಿಷ್ಟ ವಿಧಾನವನ್ನು ಬೋಧಿಸುವ ರೀತಿ ಅವರದು. ಅಧ್ಯಾಪಕರಾಗಿಯೂ ಸ್ವತಂತ್ರ ಕೃತಿ ರಚನೆ ಮಾಡಿ ತಮ್ಮದೇ ವಿಶಿಷ್ಟ ದೃಷ್ಟಿ, ಶೈಲಿ, ಅಭಿವ್ಯಕ್ತಿಕ್ರಮ ರೂಪಿಸಿಕೊಂಡವರು ಕೆಲವರು ಮಾತ್ರ. ಚಿಂತನೆ ಅನುಭವ ಅನುಭೂತಿ ಕಲ್ಪನೆಗಳನ್ನು ಅಭಿವ್ಯಕ್ತಿಸಬೇಕೆನ್ನುವ ಅದಮ್ಯ ತುಡಿತ ಸೃಜನಶೀಲತೆಯ ಲಕ್ಷಣವೂ ಅಹುದು. ವ್ಯಕ್ತಿತ್ವದ ಅವಿಭಾಜ್ಯ ಪ್ರವೃತ್ತಿಯೂ ಅಹುದು. ಸಿ. ಆರ್. ಮಂಜುಳ ಇಂತಹ ವರ್ಗಕ್ಕೆ ಸೇರಿದವರು.

ಕೆನ್ ಕಲಾಶಾಲೆಯಲ್ಲಿ ಆರ್. ಎಂ. ಹಡಪದ್ ಅವರು ಹಲವು ಪ್ರಯೋಗಗಳನ್ನು ಮಾಡುತ್ತಿದ್ದರು. ಗಾಜು ಚಿತ್ರಗಳದು ಒಂದು ಕಷ್ಟ ಸಾಧ್ಯ ಮಾಧ್ಯಮ. ಚೌಕಾಕಾರದ ಒಂದೊಂದು ಅಡಿ ಅಳತೆಯ ಚಿತ್ರಗಳು ಇದು ಸ್ಟೇಯ್ನ್ಡ್ ಗ್ಲಾಸ್ ಪೇಂಟಿಂಗ್‌ಗಿಂತ ಭಿನ್ನ. ಕಾಗದ, ರಟ್ಟು, ಬಟ್ಟೆಗಳ ಮೇಲಿನ ರಚನೆಗಿಂತ ಬೇರೆ ವಿಧಾನದ್ದು. ಗಾಜಿನ ಹಿಂಭಾಗದಲ್ಲಿ








ರಚನೆ, ಪಾರದರ್ಶಕ ಗಾಜಿನ ಮುಂಭಾಗದಲ್ಲಿ ನೋಟ ಆದ್ದರಿಂದ ಚಿತ್ರಣದ ಪ್ರತಿಯೊಂದು ಅಂಶವೂ ತಿರುವು ಮುರುವಾಗಿ ರಚಿತವಾಗಬೇಕು. ಕನ್ನಡಿಯಲ್ಲಿ ಬಿಂಬ ನೋಡಿ ಚಿತ್ರಿಸುವುದಕ್ಕೂ ಬೇರೆ ಬಗೆ. ಈ ಮಾಧ್ಯಮದಲ್ಲಿ ಮಂಜುಳ ಅವರು ದೊಡ್ಡ ಚಿತ್ರಗಳನ್ನೇ ರಚಿಸಿದ್ದಾರೆ. ವಿವಿಧ ವರ್ಣಗಳ ಬಳಕೆ, ವರ್ಣಛಾಯೆಗಳ ನಿರ್ವಹಣೆ ಕಷ್ಟವೇ. ನಿಸರ್ಗ ದೃಶ್ಯಗಳು, ನಿಸರ್ಗ ಮತ್ತು ಮನುಷ್ಯರ ಸಂಲಗ್ನ ಚಿತ್ರಗಳು, ಅಲ್ಲಿ ವರ್ಣಪ್ರಜ್ಞೆ, ವಿನ್ಯಾಸ ಆಕರ್ಷಕ. ಒಂದು ಚಿತ್ರದಲ್ಲಿ ಬೇಲಿಹೂಗಳ ನಡುವೆ ಹೂವುಗಳಂತೆಯೆ ಅರಳಿರುವ ಮುಗ್ಧಬಾಲೆಯ ಮುಖ (ಚಿತ್ರ–1) ಎಲೆ, ಹೂಗಳು, ಬಳ್ಳಿ ವಿನ್ಯಾಸಗಳ ಮುನ್ನೆಲೆ, ಹಿನ್ನೆಲೆಯಲ್ಲಿ ಎರಡೂ ಬಗೆಯ ಸೌಂದರ್ಯದ ಚಿತ್ರಣ. (ಚಿತ್ರ–2) ಇನ್ನೊಂದು ಚಿತ್ರದಲ್ಲಿ ಬಗೆಬಗೆಯ ಚಿಕ್ಕ, ದೊಡ್ಡ ಹೂಗಳ, ಬಳ್ಳಿ ಪೊದೆಗಳ ಬಣ್ಣದ ಚೆಲ್ಲಾಟ, ಬಣ್ಣಗಳ ವೈದೃಶ್ಯ ಸೃಷ್ಟಿ. ಇವೆಲ್ಲಕ್ಕಿಂತ ಭಿನ್ನವಾದ ಇನ್ನೊಂದು ರಚನೆ, ನೀಲಾಕಾಶದ ಸೂರ್ಯನ ಕಿರಣಗಳ ಹಿನ್ನೆಲೆಯಲ್ಲಿ ಶಾಂತ ಸೌಮ್ಯ ನೀಲವೃತ್ತಗಳು ಆವರಿಸುತ್ತ, ನೀಲಮಂದ ಬೆಳಕು ಕೆಂಪುಕಿರಣ ವೈದೃಶ್ಯ ಮೂಡಿಸುತ್ತವೆ. ಮುನ್ನೆಲೆಯಲ್ಲಿ ದೇವಾಲಯ, ಮಸೀದಿ ಮುಂತಾದ ಮತೀಯ ಭವನಗಳ ಸೂಚ್ಯ ನಿರೂಪಣೆ, (ಚಿತ್ರ–3) ದೃಶ್ಯದಾಚೆಗೂ ಅರ್ಥ ವಿಸ್ತರಿಸುತ್ತವೆ. ಶಾಂತತೆ ಪ್ರಖರತೆಗಳು, ಉಜ್ವಲ ಬೆಳಕಿನಲ್ಲಿ ಸ್ಪಷ್ಟ ವಿವರಗಳಲ್ಲ, ಕನಸಿನ, ಇರುಳಿನ ನೋಟಗಳಂತೆ.

ತೈಲವರ್ಣ, ಅಕ್ರಿಲಿಕ್, ಜಲವರ್ಣ ಚಿತ್ರಗಳು ಇನ್ನೊಂದು ವರ್ಗಕ್ಕೆ ಸೇರುತ್ತವೆ. ಕಲಾವಿದೆ ಮಂಜುಳ ಅವರಿಗೆ ನಿಸರ್ಗ ನಿರಂತರ ಸ್ಫೂರ್ತಿಯ ಸೆಲೆ, ಚಿಂತನೆಯ ವಸ್ತು ವಿಷಯ ಸಹ. ನಿಸರ್ಗದ ಚೆಲುವಿನ ಆಕರ್ಷಣೆಗೂ ಆಚೆಗೆ ಅವರ ಒಳಗಣ್ಣು ಹಾಯುತ್ತದೆ. ಮರಗಿಡಗಳು, ಅವುಗಳ ಕಾಂಡ, ಬೊಡ್ಡೆ, ರೆಂಬೆ, ಮೊಗ್ಗು, ಅರಳಿದ ಹೂವು, ಹೂವಿನ ಕೇಸರ, ಒಳದಿಂಡು, ಬಂಡು, ಎಲೆ, ಕಾಯಿ, ಬೀಜ, ತರಗು, ಉದುರಿದ ಒಣ ಎಲೆಗಳು, ಎಲೆಗಳ ವೈವಿಧ್ಯಮಯ ನರರಚನೆಗಳು, ಪಪಾಯಿಹಣ್ಣು, ಬಂಡುಣಿ ಚಿಟ್ಟೆಗಳು, ಹೀಗೆ ಸಸ್ಯಲೋಕದ ಅಂಗಗಳ ಅಂಗಭಾಗಗಳ ವಿಶಿಷ್ಟ ಅಭಿರಚನೆ ವಿನ್ಯಾಸಗಳು ಚಿತ್ತಾಕರ್ಷಕ. ನೋಡುವ ಕಣ್ಣುಗಳಿಗೆ, ಸೂಕ್ಷ್ಮನೋಟಕ್ಕೆ ವರ್ಣವಿನ್ಯಾಸಗಳ ಹಬ್ಬವೆ. ಮಂಜುಳ ಅವರಿಗೆ ನಿಸರ್ಗ ಮತ್ತು ಮನುಷ್ಯ, ಹಾಗೇ ಇತರ ಜೀವಿಗಳ ಸಂಬಂಧ ಕುತೂಹಲ,







ಚಿತ್ರ–10


ಚಿತ್ರ–11



ಬೆರಗು ಮೂಡಿಸುವಂತಹುದು. ಅವರ ಚಿಂತನೆ ಅವುಗಳಲ್ಲಿನ ಹೋಲಿಕೆ, ಸಾದೃಶ್ಯಗಳ ಕಡೆ. ಸಾಂಗತ್ಯಪೂರ್ಣವಾಗಿ ಬಳಸಿಕೊಂಡಾಗ ಮೂಡುವ ವಿಶಿಷ್ಟ ಅನುಭವಗಳ ಕಡೆಗೆ. ಬಾಹ್ಯ ಸೌಂದರ್ಯದಾಚೆಗೆ ಇನ್ನೊಂದು ಹಂತದಲ್ಲಿ ಅವು ನಿಸರ್ಗದ ಸೃಷ್ಟಿ ಕ್ರಿಯೆಯ ನಿಗೂಢತೆ ಯನ್ನೂ, ವಿಕಸನವನ್ನೂ ಸೂಚಿಸುತ್ತವೆ. ಹೀಗಾಗಿ ಕಲಾವಿದೆಯ ಸಂಯೋಜನೆಯ ವಿಶಿಷ್ಟ ಕಣ್ಣಿನಿಂದಾಗಿ ತಟಕ್ಕನೆ ನಿಸರ್ಗ ಮತ್ತು ಮನುಷ್ಯರ ಸೃಷ್ಟಿ ಶಕ್ತಿ, ಅಂಗಗಳು, ರಚನಾ ವಿನ್ಯಾಸ ಸಾಮ್ಯತೆ, ಕ್ರಿಯೆಗಳ ಮಿಡಿತ ಗೋಚರವಾಗ ತೊಡಗುತ್ತದೆ. ಎರಡರ ಹಿಂದಿನ ಲೈಂಗಿಕತೆಯ ಹೋಲಿಕೆಗಳು ಸೃಷ್ಟಿ ವಿಕಾಸದ ವಿಸ್ಮಯ ಲೋಕವನ್ನು ತೆರೆಯುತ್ತವೆ. ಆದರೆ ಇಲ್ಲಿ ಅಪಾಯವೂ ಇದೆ. ಸೂಚ್ಯತೆಗೆ ಬದಲು ವಿವರಪೂರ್ಣ ಸ್ಫುಟತೆಗೆ ಒಲಿದಾಗ ಅಶ್ಲೀಲತೆಯ ಸೋಂಕಾಗಬಹುದು ಅಥವಾ ವಿಜ್ಞಾನಗ್ರಂಥಗಳ ಸಂದರ್ಭ ಚಿತ್ರಗಳಾಗಬಹುದು. ಹಾಗಾಗದಂತೆ ಅಮೆರಿಕಾದ ಕಲಾವಿದೆ ಜಾರ್ಜಿಯಾ ಓಕೀಫ್ ಭಾವಗೀತಾತ್ಮಕ, ಲಯಬದ್ಧ ವಿನ್ಯಾಸಗಳಾಗಿ ಅಂತಹ ರಚನೆಗಳನ್ನು ಮಾಡಿದ್ದಾರೆ. ಮಂಜುಳಾ ಅವರು ನಿಸರ್ಗ– ಮನುಷ್ಯರ ಅಂಗ ಸಂಲಗ್ನತೆ, ಒಂದರ ಮೇಲೊಂದು ಪದರ, ಸ್ತರ ರಚನೆ ಹರಡುವಿಕೆ, ಕಾಣಿಸುವ – ಕರಗಿಸುವ ಆಟ; ಹೀಗೆ ಹಲವು ವಿಧಾನಗಳ ಸಮತೋಲ ಸಾಧಿಸಿದ್ದಾರೆ. ಇದಿಷ್ಟೇ ಆದರೆ ಅರ್ಥ ಸೀಮಿತತೆಯೂ ಉಂಟಾಗಬಹುದು. ಕುತೂಹಲ, ಬೆರಗು, ನಿಗೂಢತೆಗಳಿಗೇ ಸೀಮಿತವಾಗದೆ ಹೆಣ್ಣಿನ ಸಂವೇದನೆಯ ನವಿರು, ಸೂಕ್ಷ್ಮ ಸೂಚನೆಗಳಿವೆ. ಪ್ರತಿಭಟನೆಯ ಅಂಶಗಳೂ ಇವೆ. ಅವರ ರಚನೆಗಳಲ್ಲಂತು ಈ ಸತ್ವ ಅವರಿಗೇ ವಿಶಿಷ್ಟ.

ಪೆನ್ಸಿಲ್, ಇಂಡಿಯಾ ಇಂಕ್, ಇದ್ದಲ ಕಡ್ಡಿಗಳು; ರೇಖೆ, ವಾಷ್ ತಂತ್ರಗಳು; ಆಕ್ರಿಲಿಕ್, ತೈಲ, ಜಲವರ್ಣಗಳು; ಅವುಗಳ ಬಳಕೆಯ ಬಗೆ ಬಗೆಯ ಕೌಶಲ; ಕಾಠಿಣ್ಯ, ಮಾರ್ದವತೆ ಮುಂತಾದ ಗುಣ ಮೌಲ್ಯಗಳನ್ನು ತರುವ ಬಗೆ; ವರ್ಣರಹಿತ ರೇಖಾ ಪ್ರಪಂಚದಲ್ಲೂ ಪ್ರತ್ಯೇಕ ವಿಸ್ಮಯಲೋಕ ಸೃಷ್ಟಿಸುವ ರೀತಿ – ಇವೆಲ್ಲ ಕುತೂಹಲಕಾರಿಯಾದವು.

'ನಿಸರ್ಗದಲ್ಲಿ ನಿಸರ್ಗ' (ನೇಚರ್ ಇನ್ ನೇಚರ್) ಮಂಜುಳಾ ಅವರು ತಮ್ಮ ಒಂದು ಏಕವ್ಯಕ್ತಿ ಕಲಾ ಪ್ರದರ್ಶನಕ್ಕೆ ಕೊಟ್ಟಿದ್ದ ಶೀರ್ಷಿಕೆ. ನೇಚರ್ ಎಂಬುದು ಭೌತಿಕ ಪ್ರಕೃತಿಯು ಆಗಬಹುದು; ಸ್ವಭಾವ, ವರ್ತನೆಗಳಿಗೆ ಸಂಬಂಧಿಸಿದ್ದೂ ಆಗಬಹುದು. ಇಲ್ಲೂ ನಿಸರ್ಗ ಮತ್ತು ಮಾನವ ಸಂಬಂಧಗಳ ಸೂಚನೆಯೂ ಆಗುತ್ತದೆ. ಒಂದು ಚಿತ್ರದಲ್ಲಿ ಹೆಣ್ಣುಗಳ ಶಿರ, ಮುಖ, ಆಕೃತಿಗಳು ಸ್ಪಷ್ಟಾಸ್ಪಷ್ಟವಾಗಿ ಚಿತ್ರಿತವಾಗಿವೆ. (ಚಿತ್ರ–4) ರೆಕ್ಕೆ ಹರಡಿದ ಕೊಂಕು ಕೊಕ್ಕಿನ ರಣಹದ್ದು ಆವರಿಸಿ ಅಪ್ಪಳಿಸುವಂತೆ ಇದೆ. ಎಲೆ ಹೂ ಕಾಯಿ (ಬದನೆ) ಸೂಚನೆಯೂ ಇದೆ. ಶೋಷಿತ ಹೆಣ್ಣಿನ ಆಕೃತಿಗಳು. ಪ್ರತಿಭಟನೆಗೆ ಒಂದು ರೂಪಕವೇ ಆಗುತ್ತವೆ. ಇನ್ನೊಂದರಲ್ಲಿ ಹಸಿರು ಚಾಚಿದ ಆಚೆ ಮರಗಳು. ಅದರಾಚೆ ಬೆಟ್ಟ ಮೋಡಗಳ ಹಿನ್ನೆಲೆ ಮುನ್ನೆಲೆಯಲ್ಲಿ ಎಲೆ ಹೂ ಕಾಂಡಗಳ ನಡುನಡುವೆ ಸಂಲಗ್ನಗೊಂಡ ಹೆಣ್ಣಿನ ಆಕೃತಿಗಳು ನೆಲದಿಂದ ಎಡ ಪಾರ್ಶ್ವದಲ್ಲಿ ಮೇಲಕ್ಕೆ ಮರ ಮತ್ತು ಬಳ್ಳಿಗಳಂತೆ ಹಬ್ಬಿವೆ. (ಚಿತ್ರ–5). ಒಂದು ವಿಶಿಷ್ಟ ಎಲೆಯಾಕಾರದ ಹೂವಿನ ಚಿತ್ರ ಇಡೀ ಚೌಕಟ್ಟಿನ ಹಸಿರು ನೀಲ ವರ್ಣವಲಯಗಳ ಹಿನ್ನೆಲೆಯಲ್ಲಿ ರಕ್ತವರ್ಣದಲ್ಲಿ ಕೇಸರದಿಂಡಿನೊಡನೆ ರಚಿತವಾಗಿದೆ. ವರ್ಣಗಳ ಸಾಂಗತ್ಯವೇ ಸುಂದರ, (ಚಿತ್ರ–6) ಆಕರ್ಷಕ ಅದರ ಸೂಚ್ಯಗುಣವೂ ವಿಶಿಷ್ಟ. ಈ ಹೂ ಅದರ ಆಕಾರ ಕೇಸರದಿಂಡು ಹಲವು ಕಲಾವಿದರನ್ನು ಆಕರ್ಷಿಸಿದೆ. ಅದರ ವರ್ಣಛಾಯಾಚಿತ್ರಗಳಿವೆ. ಇಲ್ಲಿ ಆ ಹೂವು ಕಲಾಕೃತಿಯಾಗಿ ಅರ್ಥ ವತ್ತಾಗುತ್ತದೆ.

ಅವಾಸ್ತವ ಎನಿಸುವಂತಹ ನಸುಕೆಂಪು ಹೂಗೊಂಚಲ ನಡುವೆ ಬೆನ್ನುಮಾಡಿದ ಹೆಣ್ಣು (ಚಿತ್ರ–7) ಮಾನವಾಕೃತಿಯಷ್ಟೇ ಎತ್ತರದ

ಹೂವುಗಳವು. ಅರಳಿ ಒಳ ರಚನೆಗಳನ್ನು ಕಾಣಿಸುವ ಹೂವುಗಳು ಲೈಂಗಿಕ ಸೂಚ್ಯತೆ ಹೊಂದಿವೆ. ವರ್ಣಯೋಜನೆಯಲ್ಲಿ ಪಕಳೆಗಳ ನಿರ್ವಹಣೆಯಲ್ಲಿ ಮಾರ್ದವತೆ ಇದೆ. ಇನ್ನೆರಡು ಅಕ್ರಿಲಿಕ್ ವರ್ಣಚಿತ್ರಗಳಲ್ಲಿ ಮುನ್ನೆಲೆಯಲ್ಲಿ ಒಂದೊಂದರಲ್ಲಿ ಒಂದೊಂದು ಬಗೆಯ ಎಲೆಗಳು, ಹಿನ್ನೆಲೆಯಲ್ಲಿ ಗಂಡುಹೆಣ್ಣುಗಳೂ ಮನುಷ್ಯಾಕೃತಿಗಳು. ಸ್ಪಷ್ಟಾಸ್ಪಷ್ಟವೆಂಬಂತೆ ವರ್ಣಯೋಜನೆ, ವೈದೃಶ್ಯ ಗಮನಾರ್ಹ. (ಚಿತ್ರ–8, 9)

ಮಂಜುಳಾ ಅವರ ಪೆನ್ಸಿಲ್ ರೇಖೆಗಳ ನವಿರುಗುಣ, ಛಾಯಾಂತರ ತರುವ ಬಗೆ ಗಮನಾರ್ಹ. ಮೇಲೆದ್ದಿರುವ ಚಲನಾತ್ಮಕ ಪಕಳೆಗಳ, ಹೂವಿನ ದಿಂಡುಭಾಗದಲ್ಲಿ, ಗರ್ಭದೊಳಗೆಂಬಂತೆ, ಪುಟ್ಟ ಪುಟ್ಟ ಹೂ ಚಿಗುರುಗಳಿವೆ. ಹೂವಿನ ನೀಳ ದಳವೊಂದು ಮೇಲೆ ಕೈಚಾಚಿದ ಹೆಣ್ಣ ಆಕೃತಿಯಾಗಿದೆ. (ಚಿತ್ರ–10) ಇತರ ವಿವರಗಳು ಲೈಂಗಿಕ ಇಂದ್ರಿಯಗಳ ಆಕಾರಗಳನ್ನು ಬಗೆಬಗೆಯಾಗಿ ವಿನ್ಯಾಸಗೊಳಿಸಿದಂತಿವೆ. ಪೆನ್ಸಿಲ್ ಮತ್ತು ಇಂಡಿಯಾ ಇಂಕ್‌ನ ಇನ್ನೊಂದು ಚಿತ್ರ ಹೂ ಮತ್ತು ಚಿಟ್ಟೆ. ಇಲ್ಲಿ ಹೂವಿನ ಅಂಗಗಳು, ಚಿಟ್ಟೆಯ ನೀಳದೇಹ, ರೆಕ್ಕೆಗಳು, ಗಂಡಿನ ತುಟಿ ಕಣ್ಣುಗಳ ಸೂಚನೆ, ಹಿನ್ನೆಲೆಯ ಆಕಾರಗಳು, ಚಿಮ್ಮುತ್ತಿರುವ ಬುಗ್ಗೆ ಸಂಕೀರ್ಣ ರಚನೆಯನ್ನು ತೋರುತ್ತವೆ. ಅಂಥದೇ ಇನ್ನೊಂದು ಚಿತ್ರದಲ್ಲಿ ಹೆಣ್ಣಿನ ಮುಖ ಸೂಚನೆಯಿದೆ. (ಚಿತ್ರ–12) ಹೂವಿನ ಬಂಡುಬಟ್ಟಲಲ್ಲಿ ಬೀಜಗಳಿವೆ, (ಚಿತ್ರ–11) ಗರ್ಭ ಸೂಚನೆಯಾಗಿ ಎಲೆ ಬಟ್ಟಲಲ್ಲಿ ಮೇಲೆದ್ದಿರುವ ಹೂವೇ, ಎಲೆಯೆ? ಎಲೆಗಳ ನರ ವಿನ್ಯಾಸದ ಮರೆಯಲ್ಲಿ ಒಂದು ಕಣ್ಣು ಚಿತ್ರಿತವಾಗಿದೆ. (ಚಿತ್ರ–12). ಆಕಾರಗಳ ಧ್ವನಿ ಗ್ರಹಿಕೆಗೆ ಕಷ್ಟವೇನಲ್ಲ. ಇನ್ನೊಂದು ಚಿತ್ರವನ್ನು ಪತಂಗ ಚುಂಬಿತ ಮುಖವೆನ್ನಬಹುದೇನೊ. (ಚಿತ್ರ–13, 14) ಮೊಗ್ಗುಗಳಿವೆ, ಹೂ ಅರಳಿ ಮುಖವಾದಂತೆ, ಲೈಂಗಿಕ ಚಿಹ್ನೆಯೂ ಆಗುತ್ತದೆ. ಕ್ಯಾಕ್ಟಸ್‌ಗಳ ನಡುವೆ ಗಂಡು ಹೆಣ್ಣುಗಳ ಜೋಡಿ (ಚಿತ್ರ–15) ಇಂಡಿಯಾ ಇಂಕ್‌ನ ರಚನೆ ಕೆಳ ನೆಲೆಯ ರೇಖೆಗಳಿಂದ ಮೂಡಿದ ಜೋಡಿ ಆಕೃತಿ.

ಮಂಜುಳಾ ಅವರು ಮುಖಪುಟ ವಿನ್ಯಾಸವನ್ನಾಗಲಿ, ಸಂದರ್ಭಚಿತ್ರಗಳನ್ನಾಗಲಿ ರಚಿಸಲು ಒಪ್ಪುತ್ತಿರಲಿಲ್ಲ. ಒಮ್ಮೆ ಮಾತ್ರ ಕನಕದಾಸರ 'ನೀ ಮಾಯೆಯೊಳಗೊ, ನಿನ್ನೊಳು ಮಾಯೆಯೊ' ಕೀರ್ತನೆಗೆ ಮುಖಪುಟ ವರ್ಣಚಿತ್ರ ರಚಿಸಿಕೊಟ್ಟರು. ಒಂದು ಮಾಸಪತ್ರಿಕೆಗೆ, ಬಹು ಪ್ರಸಿದ್ಧ ಕೀರ್ತನೆ ಯಾವುದು ಮೊದಲು, ಬೀಜವೊ ವೃಕ್ಷವೊ? ಮೊಟ್ಟೆಯೊ ಮರಿಯೊ? ಎಂಬುದು ಬುದ್ಧಿ ಬೆಳೆದಂದಿನಿಂದಲೂ ಮನುಷ್ಯನನ್ನು ಕಾಡಿರುವ ಕಾಡುತ್ತಿರುವ ಪ್ರಶ್ನೆ. ಕನಕದಾಸರು 'ಎಲ್ಲ ನಿನ್ನೊಳಗೊ ಹರಿಯೆ' ಎಂದರೂ, 'ಉಸುರಲೆನ್ನಳವಲ್ಲ' ಎಂದೂ ಹೇಳಿದ್ದಾರೆ. ಕೀರ್ತನೆಯ ಅಂತಃಸತ್ವ, ಭಾವ ಮತ್ತು ಅರ್ಥಸಮಷ್ಟಿಯನ್ನು ದೃಶ್ಯಾತ್ಮಕವಾಗಿ ಪ್ರತಿಮಿಸಿದ್ದಾರೆ. ಮೇಲುನೋಟಕ್ಕೆ ಒಂದು ಜನಪ್ರಿಯವಾದ ರೂಪಿಕೆಯನ್ನು ಬಳಸಿಕೊಂಡಿದ್ದಾರೆ ಎಂದು ಎನಿಸುವುದಾದರೂ ಸಾಂಕೇತಿಕತೆಯ ಅರ್ಥ ಬೇರೆ. ಗಾಢ ನೀಲಿಯ ಶೂನ್ಯದಿಂದ ಕಾಣಿಸಿಕೊಳ್ಳುವ ಬೆಳಕಿನ ಹಸ್ತ, ಸುತ್ತಲೂ ಆವರಿಸುತ್ತ ಚಾಚುವ ಕಿರಣಗಳು. (ಚಿತ್ರ–16). ಆ ಪ್ರಭಾಮಂಡಲದ ಅಭಯವನ್ನು ಸೂಚಿಸುತ್ತಿವೆ. (ಕನಕದಾಸರದೇ 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಕೀರ್ತನೆ ನೆನಪಾಗುತ್ತದೆ). ದೈವೀ ಬೆಳಕಿನೊಳಗೆ ಎಲ್ಲ ಸುರಕ್ಷಿತ. ಪ್ರಧಾನವಾಗಿ ಇದು ಗಮನ ಸೆಳೆದರೂ ಬೆಳಗಿನೊಳಗೇ (ಬೆಳಕು ಚೈತನ್ಯದ ಇನ್ನೊಂದು ರೂಪವೇ ಬಗೆಯೇ ಅಲ್ಲವೆ) ಸೃಷ್ಟಿಯ ನಿಗೂಢತೆ, ಜಟಿಲತೆ ಮನುಷ್ಯನನ್ನು ಕಾಡುತ್ತವೆ. ಶಂಖಾಕಾರದ ಚಿಪ್ಪು, ಒಳಗೆ ಜೀವ ಅರಳುತ್ತಿದೆ. ಬೀಜ ಒಡೆದು ಮೊಗ್ಗು, ಹೂವು, ಹೂವಿನಂತಹ ಮೃದು



ಚಿತ್ರ–13



ಚಿತ್ರ–14


ಚಿತ್ರ–15


ಚಿತ್ರ–16

ಗರ್ಭದೊಳಗೆ ಮಗು. ಕೆಳ ಬಲಭಾಗದಲ್ಲಿ ಒಗಟನ್ನು ನೆನಪಿಸುವ ಮೊಟ್ಟೆ, ಒಡೆದು ಹೊರ ಕಾಣಿಸುತ್ತಿರುವ ತೆರೆದ ಕೊಕ್ಕಿನ ಹಕ್ಕಿ ಮರಿ. ಮೊಟ್ಟೆ ಮೊದಲೊ, ಮರಿ ಮೊದಲೊ? ಕೆಳಗೆ ಅಗಲಕ್ಕೂ ವಿನ್ಯಾಸ ಪೂರ್ಣ ಸಸ್ಯ ಜೀವರಾಶಿಯ ಮೀನಿನಂತಹ ಆಕಾರ. ಜೀವ ರಾಶಿಯ ಪೀಠವೆ, ಸಂಕೇತವೆ? ಹೊರಚಾಚಿ ಆವರಿಸಿರುವ ಕಿರಣಗಳೇ ಮತ್ತೆ ತಮ್ಮ ಕಡೆಗೇ ಒಳ ಸೆಳೆಯುತ್ತವೆ. ಅಲ್ಲಿಂದ ತೊಡಗು, ಮತ್ತು ಕೊನೆಗೆ ಎಲ್ಲವೂ ಅಲ್ಲಿಗೆ. ಇದು ಭ್ರಮೆಯೊ ವಾಸ್ತವವೊ? ಕನಕದಾಸರ ಕೀರ್ತನೆಯ ಧ್ವನಿ ಆ ದ್ವಂದ್ವ ಮತ್ತು ಅದರ ಹಿಂದಿರುವ ಸತ್ಯವನ್ನು ಹೇಳುತ್ತಿದೆ. ಇದು ಸಂದರ್ಭ ಚಿತ್ರವಾಗಿಯೂ ಸ್ವತಂತ್ರರಚನೆ ಎನಿಸುವ ಮಂಜುಳಾ ಅವರ ಕೃತಿ.

ಬೆಂಗಳೂರು ಕಾಕ್ಸ್‌ಟೌನಿನಲ್ಲಿ ಜನಿಸಿದ ಮಂಜುಳಾ ಪ್ರಾರಂಭದ ವಿದ್ಯಾಭ್ಯಾಸ ಗುಡ್‌ವಿಲ್ ಶಾಲೆಯಲ್ಲಿ, ಆನಂತರ ಮಹಾರಾಣಿ ಕಾಲೇಜಿನಲ್ಲಿ ಪಿ.ಯು.ಸಿ ಮುಗಿಸಿ ಕೆನ್ ಕಲಾಶಾಲೆಯಲ್ಲಿ ಚಿತ್ರಕಲೆಯಲ್ಲಿ ಐದು ವರ್ಷಗಳ ಡಿಪ್ಲೊಮಾ ಮಾಡಿದರು. ಆರ್.ಎಂ. ಹಡಪದ್ ಅವರ ಶಿಷ್ಯೆ. ಅಲ್ಲೆ ಅಧ್ಯಾಪಕಿಯಾಗಿದ್ದರು. ಕೆಲವು ಏಕವ್ಯಕ್ತಿ ಕಲಾಪ್ರದರ್ಶನ ನೀಡಿದ್ದಾರೆ, ಸಮೂಹ ಕಲಾಪ್ರದರ್ಶನಗಳಲ್ಲಿ ಭಾಗಿಯಾಗಿದ್ದರು. ಕೇಂದ್ರ ಲಲಿತಕಲಾ ಅಕಾಡೆಮಿ ಮೊದಲಾದ ಸಂಸ್ಥೆಗಳಲ್ಲಿ ಅವರ ಕೃತಿಗಳು ಸಂಗ್ರಹಿತವಾಗಿವೆ. ಬೆಂಗಳೂರು, ಗುಲ್ಬರ್ಗ, ಗೋವಾಗಳಲ್ಲೂ ಖಾಸಗಿ ಸಂಗ್ರಹಗಳಲ್ಲಿ ಅವರ ಕೃತಿಗಳಿವೆ. ಇಂತಹ ಸೂಕ್ಷ್ಮಮನಸ್ಸಿನ, ವಿಶಿಷ್ಟ ಸ್ತ್ರೀಸಂವೇದನೆಯ, ಸೌಮ್ಯ ವ್ಯಕ್ತಿತ್ವದ ಅಧ್ಯಾಪಕಿ–ಕಲಾವಿದೆ 2003ರಲ್ಲಿ ಬೆಂಗಳೂರಲ್ಲಿ ವಾಹನ ಅಪಘಾತದಲ್ಲಿ ನಿಧನರಾದರು. ಒಂದು ಅರಳುತ್ತಿದ್ದ ಪ್ರತಿಭಾಪುಷ್ಪ ಮುರುಟಿಹೋಯಿತು.

❑

*ಎಂ. ಕೆ. ಇಂದಿರಾ ಅವರ ಮಲೆನಾಡು ಹೆಣ್ಣುಗಳು ಕಾಡುವಂಥವರು. ಗಟ್ಟಿಗಿತ್ತಿ ಹೆಂಗಸರು. ಮೇಲುನೋಟಕ್ಕೆ ತಂದೆ–ಗಂಡನ ಅಧೀನರಾಗಿ ಕಂಡರೂ, ಯಾರನ್ನೂ ಯಾವುದಕ್ಕೂ ಆಧರಿಸಿದವರಲ್ಲ, ಏನನ್ನೂ ಸಾಧಿಸಬಲ್ಲವರು, ಶ್ರಮಜೀವಿಗಳು, ದುಡಿದು ದಣಿದವರು, ಗಂಡನ ಕೈ ಕಾದವರಲ್ಲ. ಮನೆಯ ವಿಷಯವೊಂದನ್ನು ಬಿಟ್ಟು ಊರ ರಾಜಕೀಯವನ್ನೆಲ್ಲ ಹರಟಿ ಕುಳಿತ ಗಂಡಂದಿರ ಪಾಲಿನ 'ಗಂಡು' ಕೆಲಸಗಳನ್ನು ಮಾಡಿ ಒಗೆದ ಗಂಡೆದೆಯವರು, ಸ್ವಾವಲಂಬಿಗಳು, ಸ್ವಾಭಿಮಾನಿಗಳು, ಕ್ರಾಂತಿಯ ಯಾವ ಘೋಷಣೆ ಇಲ್ಲದೆ ಕ್ರಿಯೆಯಲ್ಲೆ, ದುಡಿತದಲ್ಲೆ. ಬದುಕಿ–ಬಾಳಿದವರು.*

*ನೇಮಿಚಂದ್ರ ('ಸುರಗಿ' ಗ್ರಂಥದಿಂದ)*

# ಡೆಂಗಿ ಜ್ವರ ತಡೆಗಟ್ಟುವ ಬಗ್ಗೆ ಮುಂಜಾಗ್ರತೆ ಕ್ರಮಗಳು

## ಡೆಂಗಿ ಜ್ವರ ಎಂದರೇನು?

ಡೆಂಗಿ ಜ್ವರವು ಡೆಂಗಿ ವೈರಸ್‌ನಿಂದ ಉಂಟಾಗುವ ಕಾಯಿಲೆ. ಈ ಕಾಯಿಲೆಯು ಸೋಂಕು ಹೊಂದಿದ ಈಡಿಸ್ ಈಜಿಪ್ಟೈ ಎಂಬ ಸೊಳ್ಳೆಯ ಕಚ್ಚುವಿಕೆಯಿಂದ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

## ಈ ರೋಗದ ಮುಖ್ಯ ಲಕ್ಷಣಗಳು

ಇದ್ದಕ್ಕಿದ್ದಂತೆ ತೀವ್ರಜ್ವರ, ವಿಪರೀತ ತಲೆನೋವು, ಕಣ್ಣುಗಳ ಹಿಂಭಾಗದಲ್ಲಿ ನೋವು, ಮಾಂಸಖಂಡ ಮತ್ತು ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ಹಲವು ಬಾರಿ ಮೂಗು, ಬಾಯಿ ಮತ್ತು ವಸಡುಗಳಲ್ಲಿ ರಕ್ತಸ್ರಾವದ ಚಿಹ್ನೆಗಳು ಕಂಡುಬರುತ್ತವೆ. ಈ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ರಕ್ತಪರೀಕ್ಷೆ ಮಾಡಿಸಿ, ಸೂಕ್ತ ಚಿಕಿತ್ಸೆ ಪಡೆಯುವುದು.

## ಸಾರ್ವಜನಿಕರು ಡೆಂಗಿ ರೋಗವನ್ನು ತಡೆಗಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು:

1. ಡೆಂಗಿ ಹರಡುವ ಈಜಿಪ್ಟೈ ಸೊಳ್ಳೆಗಳು ಮನೆಯಲ್ಲಿನ ನೀರು ಶೇಖರಿಸುವ ಸಿಮೆಂಟ್ ತೊಟ್ಟಿಗಳು, ಬ್ಯಾರೆಲ್‌ಗಳು, ಡ್ರಮ್‌ಗಳು, ಏರ್‌ಕೂಲರ್, ಹೂಕುಂಡದ ನೀರಿನ ಸಂಗ್ರಹಗಳು ಇತ್ಯಾದಿಗಳಲ್ಲಿ ಉತ್ಪತ್ತಿಯಾಗುವುದರಿಂದ ಇವುಗಳನ್ನು ವಾರಕ್ಕೊಮ್ಮೆ ಸಂಪೂರ್ಣವಾಗಿ ಶುಚಿಗೊಳಿಸಿ, ಯಾವಾಗಲೂ ಭದ್ರವಾದ ಮುಚ್ಚಳಿಕೆಯಿಂದ ಮುಚ್ಚಿ ಸೊಳ್ಳೆ ಉತ್ಪತ್ತಿಯಾಗದಂತೆ ಎಚ್ಚರವಹಿಸಿ.
2. ಬಯಲಲ್ಲಿ ಪೈರು, ಎಳನೀರಿನ ಚಿಪ್ಪು ಮತ್ತು ತ್ಯಾಜ್ಯ ವಸ್ತುಗಳಲ್ಲಿ ನೀರು ಸಂಗ್ರಹವಾಗದಂತೆ ಸೂಕ್ತ ವಿಲೇವಾರಿ ಮಾಡುವುದು ಅಥವಾ ನಾಶಗೊಳಿಸುವುದು.
3. ಈ ರೋಗ ಹರಡುವ ಸೊಳ್ಳೆಗಳು ಹಗಲಲ್ಲಿ ಕಚ್ಚುವುದರಿಂದ ಸೊಳ್ಳೆ ಕಡಿತದಿಂದ ಪಾರಾಗಲು ಮಕ್ಕಳು, ವಿಶ್ರಾಂತಿ ಪಡೆಯುವ ವಯೋವೃದ್ಧರು, ಕಾಯಿಲೆಯಿಂದ ನರಳುವವರು ತಪ್ಪದೇ ಸೊಳ್ಳೆಪರದೆಯನ್ನು ಉಪಯೋಗಿಸುವುದು ಹಾಗೂ ಇತರೆ ಸೊಳ್ಳೆ ನಿರೋಧಕಗಳನ್ನು ಬಳಸುವುದು. ಹೀಗೆ ಮಾಡುವುದರಿಂದ ಈ ರೋಗವನ್ನು ತಡೆಗಟ್ಟುವುದು ಸುಲಭ.

***ನಿಮ್ಮ ಮನೆಯ ಒಳಗೆ ಹಾಗೂ ಮನೆಯ ಸುತ್ತಮುತ್ತ ಸೊಳ್ಳೆ ಉತ್ಪತ್ತಿಯನ್ನು ತಡೆಗಟ್ಟಿ. ಡೆಂಗಿ ಜ್ವರ ನಿಯಂತ್ರಿಸಿ.***


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09